## 2. ಚೌಡೇಶ್ವರಿ ದೇವಿ ದೇವಸ್ಥಾನ, ಸಿಗಂದೂರು

ಸಿಗಂಧುರು ಎಂಬುದು ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿರುವ ಒಂದು ಸಣ್ಣ ಸ್ಥಳವಾಗಿದ್ದು, ಇದು ಜೋಗ ಜಲಪಾತಕ್ಕೆ ಸಮೀಪದಲ್ಲಿದೆ. ಈ ಸ್ಥಳದ ಪ್ರಮುಖ ಆಕರ್ಷಣೆ ಚೌಡೇಶ್ವರಿ ದೇವಿ ದೇವಸ್ಥಾನ. ನೀವು ಸಾಗರ ಪಟ್ಟಣವನ್ನು ಪ್ರವೇಶಿಸುವಾಗ, ಇಕ್ಕೇರಿಯ ಕಡೆಗೆ ಎಡ ತಿರುವು ತೆಗೆದುಕೊಳ್ಳಿ. ಕ್ರಿ.ಶ 16 ನೇ ಶತಮಾನದಲ್ಲಿ ಕೆಳದಿ ಅರಸರು ನಿರ್ಮಿಸಿದ ಸುಂದರವಾದ ಅಘೋರೇಶ್ವರ ಶಿವನ ದೇವಾಲಯವಿದೆ. ಮುಂಭಾಗದಲ್ಲಿ ಇರುವ ನಂದಿ ತುಂಬಾ ನಯವಾಗಿ ಹೊಳೆಯುವಂತೆ ಇದೆ ಮತ್ತು ದೇವಾಲಯದ ಗೋಡೆಗಳ ಮೇಲೆ ಉತ್ತಮ ಕೆತ್ತನೆಗಳನ್ನು ಚಿತ್ರಿಸಿದ್ದಾರೆ.

ಈ ಸ್ಥಳದಿಂದ 30 ಕಿ.ಮೀ ಕ್ರಮಿಸಿ ಹೊಳೆಬಾಗಿಲನ್ನು ತಲುಪಬೇಕು. ಇಲ್ಲಿ ನಿಮ್ಮ ವಾಹನ ಸಮೇತ ಬಾರ್ಜನಲ್ಲಿ ಸುಮಾರು 2 ಕಿಮೀ ನದಿಯಲ್ಲಿ ಕ್ರಮಿಸಿದರೆ ಕಲಸವಳ್ಳಿ ಊರನ್ನು ತಲುಪುವಿರಿ. ಅಲ್ಲಿಂದ 5 ಕಿಮೀ ಕ್ರಮಿಸಿದರೆ ಸಿಂಗಂದುರು. ಅಥವಾ ಕೊಲ್ಲೂರು, ನಾಗೋಡಿ ಘಾಟ, ತುಮರಿ, ಸಿಗಂದೂರು ಸುಮಾರು 45 ಕಿಮೀ ಎಲ್ಲಾ ರಸ್ತೆ ಪ್ರವಾಸದಿಂದ ತಲುಪಬಹುದು.

ಭಗವಾನ್ ಶ್ರೀ ಶ್ರೀಧರಸ್ವಾಮಿಗಳ ಪ್ರಾರ್ಥನೆಯಮೇರೆಗೆ ಉಗ್ರಸ್ವರೂಪಿ ಚೌಡೇಶ್ವರಿ ದೇವಿಯು ಸೌಮ್ಯ ಸ್ವರೂಪಿಯಾಗಿ ಭಕ್ತರನ್ನು ರಕ್ಷಿಸುತ್ತಿದ್ದಾಳೆ ಎಂದು ಪ್ರತೀತಿ. ದೇವಾಲಯದ ಬಲಭಾಗದಲ್ಲಿ ಇರುವ "ಭೂತದ ಕಟ್ಟೆ"ಯಲ್ಲಿ ವೀರಭದ್ರ ದೇವರು, ಎಡಭಾಗದಲ್ಲಿ ಶ್ರೀ ಶನೇಶ್ವರ ಮತ್ತು ಶ್ರೀ ರಕ್ತೇಶ್ವರಿ ದೇವಸ್ಥಾನವಿದೆ. ಕ್ಷೇತ್ರದ ಧರ್ಮದರ್ಶಿ ಶ್ರೀ ರಾಮಪ್ಪನವರು ಮತ್ತು ಮುಖ್ಯ ಅರ್ಚಕ ಶ್ರೀ ಎಸ್.ಪಿ.ಶೇಷಗಿರಿ ಭಟ್. ಪ್ರತಿವರ್ಷ "ಮಕರ ಸಂಕ್ರಾಂತಿ" ದಿನದಂದು (ಜನವರಿ 14-15) ರಂದು ಜಾತ್ರೆ ನಡೆಯುತ್ತದೆ. ಭಕ್ತರು ಶರಾವತಿ ನದಿಯಲ್ಲಿ ಪವಿತ್ರ ಸ್ನಾನ ಮಾಡಿ ದೇವಿಯನ್ನು ಪ್ರಾರ್ಥಿಸುತ್ತಾರೆ.

ದೈನಂದಿನ ಪೂಜೆ/ದರ್ಶನ ಸಮಯಗಳು ಬೆಳಿಗ್ಗೆ: 7.30 ರಿಂದ 2.00 ಪಿಎಂ ಸಂಜೆ: 3.00 ರಿಂದ 7.00 ವರೆಗೆ

ಲಾಂಚ್ ಸಮಯ ಬೆಳಿಗ್ಗೆ 8-00, 9-15, 10-15, 11-30, ಮಧ್ಯಾಹ್ನ 1-30, 2-45, ಸಂಜೆ 4-00, 4-40, 5-30.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಸಿಗಂಧೂರು ಪುರವರಾಧೀಶ್ವರೀ ಶ್ರೀ ವೀರಭದ್ರ ಸ್ವಾಮೀ ಸಮೇತ ಶ್ರೀ ಚೌಡೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||

ಭಕ್ತರಿಗಾಗಿ ಸೌಲಭ್ಯಗಳು - ಮಧ್ಯಾಹ್ನ ಎಲ್ಲಾ ಭಕ್ತರಿಗೆ ಉಚಿತ ಭೋಜನ ವ್ಯವಸ್ಥೆ ಲಭ್ಯವಿದೆ. ಕಲ್ಯಾಣ ಮಂಟಪ ಮದುವೆ ಮುಂಜಿ ಚೌಳ ಮತ್ತು ಇತರೆ ಧಾರ್ಮಿಕ ಕೆಲಸಗಳಿಗೆ ಲಭ್ಯವಿದೆ. ಎರಡು ಹಾಸಿಗೆಯ 60 ಕೊಠಡಿಗಳ ವಸತಿ ವ್ಯವಸ್ಥೆ ಲಭ್ಯವಿದೆ. ಗಂಡಸರು/ಹೆಂಗಸರಿಗೆ ಪ್ರತ್ಯೇಕ ಸ್ನಾನ/ಶೌಚಾಲಯಗಳ ಉಚಿತ ವ್ಯವಸ್ಥೆ ಲಭ್ಯವಿದೆ.

ಇಲ್ಲಿಂದ ಮುಂದಕ್ಕೆ ಕೊಲ್ಲೂರು ಕಡೆಗೆ ಅಥವಾ ಸಾಗರಕ್ಕೆ ಹಿಂದಿರುಗಬೇಕು

## 3. ಶಿವಮೊಗ್ಗ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ವೇಣುಗೋಪಾಲ / ಶ್ರೀ ಲಕ್ಷ್ಮಿ ನರಸಿಂಹ ದೇವಾಲಯಗಳು ಭದ್ರಾವತಿ ಭದ್ರಾವತಿ ತಾಲ್ಲೂಕು
2. ಶ್ರೀ ಶಂಕರಾಚಾರ್ಯ ಸರ್ವಜ್ಞ ಪೀಠ ಕೊಡಚಾದ್ರಿ ಹೊಸನಗರ ತಾಲ್ಲೂಕು
3. ಶ್ರೀ ರಾಮಚಂದ್ರಾಪುರ ಮಠ ಹೊಸನಗರ, ಹೊಸನಗರ ತಾಲ್ಲೂಕು
4. ಶ್ರೀ ಪದ್ಮಾವತಿ ದೇವಸ್ಥಾನ ಮತ್ತು ಮಠ, ಹುಮಚ, ಹೊಸನಗರ ತಾಲ್ಲೂಕು
5. ಶ್ರೀ ಉಮಾ ಮಹೇಶ್ವರ ದೇವಸ್ಥಾನ, ಹೊಸಗುಂದ, ಸಾಗರ ತಾಲ್ಲೂಕು
6. ಶ್ರೀ ಅಗೋರೇಶ್ವರ ದೇವಸ್ಥಾನ, ಇಕ್ಕೇರಿ (ಎಎಸ್ಐ), ಸಾಗರ ತಾಲ್ಲೂಕು
7. ಶ್ರೀ ರಾಮೇಶ್ವರ ದೇವಸ್ಥಾನ, ಕೆಳದಿ (ಎಎಸ್ಐ) ಸಾಗರ ತಾಲ್ಲೂಕು
8. ಶ್ರೀ ವೆಂಕಟರಮಣ ದೇವಸ್ಥಾನ, ಕುಮ್ಸಿ, ಸಾಗರ ತಾಲ್ಲೂಕು
9. ಶ್ರೀ ಮಾರಿಕಾಂಬ ದೇವಸ್ಥಾನ, ಸಾಗರ, ಸಾಗರ ತಾಲ್ಲೂಕು
10. ಶ್ರೀ ತ್ರಿಪುರಾಂತಕೇಶ್ವರ, ಶ್ರೀ ಕೇದಾರೇಶ್ವರ, ಶ್ರೀ ಸೋಮೇಶ್ವರ ದೇವಾಲಯಗಳು, ಬೆಳ್ಳಿಗಾವಿ (ಎಎಸ್ಐ) ಶಿಕಾರಿಪುರ ತಾಲ್ಲೂಕು
11. ಶ್ರೀ ಸೋಮೇಶ್ವರ, ಶ್ರೀ ತ್ರಿಮೂರ್ತಿ ನಾರಾಯಣ ದೇವಾಲಯಗಳು, ಬಂದಳಿಕೆ, ಶಿಕಾರಿಪುರ ತಾಲ್ಲೂಕು
12. ಶ್ರೀ ಶಾಂತಿನಾಥ ಬಸದಿ, ಚಿಕ್ಕಮಾಗಡಿ, ಶಿಕಾರಿಪುರ ತಾಲ್ಲೂಕು
13. ದಕ್ಷಿಣಮ್ನಾಯ ಕೂಡ್ಲಿ ಶಾರದ ಪೀಠ ಕೂಡ್ಲಿ ಶಿವಮೋಗ್ಗ ತಾಲ್ಲೂಕು
14. ಶ್ರೀ ಚಿಂತಾಮಣಿ ನರಸಿಂಹ ದೇವಸ್ಥಾನ ಕೂಡ್ಲಿ ಶಿವಮೋಗ್ಗ ತಾಲ್ಲೂಕು
15. ಶ್ರೀ ರಾಮೇಶ್ವರ ದೇವಸ್ಥಾನ ಕೂಡ್ಲಿ ಶಿವಮೋಗ್ಗ ತಾಲ್ಲೂಕು
16. ಶ್ರೀ ಕೈಟಭೇಶ್ವರ, ಶ್ರೀ ರಾಮೇಶ್ವರ ದೇವಾಲಯಗಳು ಕುಬತೂರ್ (ಎಎಸ್ಐ) ಸೊರಬಾ ತಾಲ್ಲೂಕು
17. ಶ್ರೀ ಮಧು ಕೈಟಭ ದೇವಸ್ಥಾನ ಕೋಟಿಪುರ ಸೊರಬಾ ತಾಲ್ಲೂಕು
18. ಶ್ರೀ ರೇಣುಕಾಂಬ ದೇವಸ್ಥಾನ ಚಂದ್ರಗುತ್ತಿ ಸೊರಬಾ ತಾಲ್ಲೂಕು
19. ಶ್ರೀ ವೇಣುಗೋಪಾಲ ದೇವಸ್ಥಾನ ಅಗುಂಬೆ ತೀರ್ಥಹಳ್ಳಿ ತಾಲ್ಲೂಕು

## 3. ಉಡುಪಿ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಉಡುಪಿ ಒಂದು ಕರಾವಳಿ ಜಿಲ್ಲೆ. ಈ ಜಿಲ್ಲೆಯನ್ನು ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ದಕ್ಷಿಣಕನ್ನಡ ಜಿಲ್ಲೆಗಳು ಹಾಗೂ ಅರಬ್ಬಿ ಸಮುದ್ರ ಸುತ್ತುವರಿದಿವೆ. ಉಡುಪಿ ಪಟ್ಟಣವು ಜಿಲ್ಲಾ ಕೇಂದ್ರ. ಕಾರ್ಕಳ, ಕುಂದಾಪುರ, ಉಡುಪಿ ಎಂಬ 3 ತಾಲ್ಲೂಕುಗಳನ್ನು ಹೊಂದಿದೆ.

ಉಡುಪಿ (ಉಡಿಪಿ) ಎಂಬ ಪದವು ಈಗ ಪ್ರಪಂಚದಾದ್ಯಂತ ಕಂಡುಬರುವ ರುಚಿಕರವಾದ ಸಸ್ಯಾಹಾರಿ ಆಹಾರದ ಸಮಾನಾರ್ಥಕವಾಗಿದೆ. ಉಡುಪಿಯು ಶೈಕ್ಷಣಿಕ ಮತ್ತು ಹಣಕಾಸು ಸಂಸ್ಥೆಗಳಿಗೆ ಜನಪ್ರಿಯವಾಗಿದೆ. ಗೊಳಿಬಜ್ಜಿ, ಗಡಬಡ ಐಸ್ ಕ್ರೀಮ್, ಬನ್ಸ್ ಬಾಜಿ, ಗೋಳಿಬಜೆ, ನೀರ್ ದೋಸೆ, ಕೋರಿರೊಟ್ಟಿ, ಪತ್ರೊಡೆ, ರಾಗಿ ಮಣ್ಣಿ ಮುಂತಾದವನ್ನು ಮರೆಯದೆ ಸವಿಯಿರಿ.

ಭಾಷೆ - ಉಡುಪಿಯಲ್ಲಿ ತುಳು ಹೆಚ್ಚು ವ್ಯಾಪಕವಾಗಿ ಮಾತನಾಡುವ ಭಾಷೆ. ಇತರ ಮಹತ್ವದ ಭಾಷೆಗಳೆಂದರೆ ಕನ್ನಡ, ಕೊಂಕಣಿ.

ಪಾಪನಾಶಿನಿ, ಸ್ವರ್ಣ, ಸೀತಾ, ಪಂಚಗಂಗವಲ್ಲಿ, ಸೌಪರ್ಣಿಕಾ, ವಾರಾಹಿ, ಚಕ್ರ ಇವು ಉಡುಪಿಜಿಲ್ಲೆಯ ನದಿಗಳು.

ಸಾರಿಗೆ ವ್ಯವಸ್ಥೆ - ಈ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿಗಳಾದ 66, 169, 169A, ಮತ್ತು ಕೊಂಕಣ ರೈಲ್ವೇ ಹಳಿಗಳು ಉತ್ತಮ ಸಾರಿಗೆ ಕಲ್ಪಿಸಿವೆ. ಖಾಸಗಿ ಮತ್ತು ಸರಕಾರಿ ಬಸ್ ಸೌಲಭ್ಯ ಉತ್ತಮವಾಗಿದೆ.

ಮಲ್ಪೆ ಕಡಲತೀರ ಮತ್ತು ಸಂತ ಮೇರಿಯ ದ್ವೀಪ, ಮರವಂತೆ ಕಡಲತೀರ, ಕುಡ್ಲು ತೀರ್ಥ ಜಲಪಾತ, ಡಾ. ಕೋಟ ಶಿವರಾಮ್ ಕಾರಂತ್ ಥೀಮ್ ಪಾರ್ಕ್ ಕೋಟಾ, ಡಿವೈನ್ ಪಾರ್ಕ್ ಸಾಲಿಗ್ರಾಮ, ಥೋನ್ಸೆ ಆಯುರ್ವೇದ ಆಸ್ಪತ್ರೆ, ಎಸ್‌ಡಿಎಂ ಆಯುರ್ವೇದ ಆಸ್ಪತ್ರೆ, ಮಣಿಪಾಲ್ ಮ್ಯೂಸಿಯಂ ಆಫ್ ಅನ್ಯಾಟಮಿ & ಪ್ಯಾಥಾಲಜಿ,

ಯಕ್ಷಗಾನ ಜಾನಪದ ಕಲೆ, ಕಂಬಳ ಕೆಸರು ಗದ್ದೆಯಲ್ಲಿ ಕೋಣಗಳ ಓಟ, ಹುಲಿ ವೇಶ, ಎರಡು ವರ್ಷಕ್ಕೊಮ್ಮೆ ನಡೆಯುವ ಪರ್ಯಾಯ ಉತ್ಸವ ಮುಂತಾದವು ಉಡುಪಿಜಿಲ್ಲೆಯ ಜನಪ್ರಿಯ ಉತ್ಸವಗಳು.


UDUPI DISTRICT
KARNATAKA
N
UTTARA KANNADA DISTRICT
SHIMOGA DISTRICT
KUNDAPURA
ARABIAN SEA
UDUPI
KARKAL
CHIKMAGALUR DISTRICT
DAKSHINA KANNADA DISTRICT
KEY MAP
LEGEND
Taluk boundary
District headquarters
Taluk headquarters
Hilly area
Metalled road
Natonal Highway

## 1. ಮೂಕಾಂಬಿಕ ದೇವಸ್ಥಾನ ಕೊಲ್ಲೂರು

ಶ್ರೀ ಆದಿ ಶಂಕರಾಚಾರ್ಯರು ಶ್ರೀ ಮೂಕಾಂಬಿಕಾ ದೇವಿಯನ್ನು ಸೌಪರ್ಣಿಕಾ ನದಿಯ ದಂಡೆಗಳಲ್ಲಿ ಮತ್ತು ಸದಾಹಸಿರಿನಿಂದಾವೃತವಾದ ಕೊಡಚಾದ್ರಿ ಬೆಟ್ಟದ ಸಾಲುಗಳಲ್ಲಿರುವ ಕುಂದಾಪುರದಿಂದ 40 ಕಿಮಿ ದೂರದಲ್ಲಿರುವ ಕೊಲ್ಲೂರಿನಲ್ಲಿ ಪ್ರತಿಷ್ಠಾಪಿಸಿದರು. ಕರ್ನಾಟಕ ಮತ್ತು ಕೇರಳ ರಾಜ್ಯಗಳ ಜನರಿಗೆ ಅತ್ಯಂತ ಪ್ರಸಿದ್ಧ ಪೂಜಾ ಸ್ಥಳಗಳ ಪೈಕಿ ಒಂದೆನಿಸಿದೆ. ಈಗ ಕರ್ನಾಟಕ ಮುಜರಾಯಿ ಇಲಾಖೆಯ ಅಡಳಿತಕ್ಕೊಳಪಟ್ಟಿದೆ.

ಮೂಕಂಬಿಕಾ ದೇವಿ ದೇವಸ್ಥಾನವನ್ನು ಕೇರಳ ಶೈಲಿಯ ವಾಸ್ತುಶಿಲ್ಪದಲ್ಲಿ ನಿರ್ಮಿಸಲಾಗಿದೆ. ಇದು ಒಂದು ದೊಡ್ಡ ಪ್ರಾಂಗಣ ಮತ್ತು ವಿಶಾಲವಾದ ಗರ್ಭಗೃಹವನ್ನು ಹೊಂದಿದೆ, ಇದರಲ್ಲಿ ಶಿವ ಮತ್ತು ಶಕ್ತಿ ಎರಡನ್ನೂ ಒಳಗೊಂಡ ಜ್ಯೋತಿರ್-ಲಿಂಗ ರೂಪದಲ್ಲಿ ಮೂಕಾಂಬಿಕಾ ದೇವಿಯ ಆರಾಧನೆ ಇಂದಿಗೂ ಆದಿ ಶಂಕರಾಚಾರ್ಯರು ರೂಪಿಸಿರುವ ವಿಜಯಾಗಮ ಪದ್ಧತಿಯಂತೆ ನೆಡೆಸಿಕೊಂಡು ಬರಲಾಗುತ್ತಿದೆ. ಶ್ರೀ ಚಕ್ರದ ಯಂತ್ರದ ಮೇಲೆ ದೇವಿಯ ಸುಂದರವಾದ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ವಿಗ್ರಹವನ್ನು ಪಂಚಲೋಹದಿಂದ ಮಾಡಲಾಗಿದೆ. ದೇವಿಯನ್ನು ಪದ್ಮಾಸನ ಭಂಗಿಯಲ್ಲಿ ಕುಳಿತು ಅವಳ ಎರಡು ಮೇಲಿನ ಕೈಗಳಲ್ಲಿ 'ಶಂಕು' ಮತ್ತು 'ಚಕ್ರ' ಹಿಡಿದು 'ಅಭಯ' ಮತ್ತು 'ವರದಾ' ಮುದ್ರೆಗಳನ್ನು ಅವಳ ಇನ್ನೊಂದು ಕೈಯಲ್ಲಿ ತೋರಿಸುತ್ತಾಳೆ. ದೇವಿಯ ವಿಗ್ರಹವು ಸೊಗಸಾದ ಚಿನ್ನ ಮತ್ತು ವಜ್ರದ ಆಭರಣಗಳಿಂದ ಅಲಂಕರಿಸಲ್ಪಟ್ಟಿದೆ.

ದರ್ಶನ ಪದ್ಧತಿ - ಮೂಕಾಂಬಿಕಾ ದೇವಸ್ಥಾನದ ಪೂರ್ವ ಭಾಗಕ್ಕೆ ಮಹಾಧ್ವಾರವಿದೆ. ಈ ದ್ವಾರದಿಂದ ದೇವಸ್ಥಾನವನ್ನು ಪ್ರವೇಶಿಸಿದಾಗ ಚಿನ್ನದ ಧ್ವಜಸ್ಥಂಭವನ್ನು ಕಾಣಬಹುದು. ಇದರ ಹಿಂಭಾಗದಲ್ಲಿ ದೀಪಸ್ಥಂಭವಿದೆ. ಈ ದೀಪಸ್ಥಂಭದಲ್ಲಿ ಕೆತ್ತಿರುವ ಗಣಪತಿಯನ್ನು ಕಂಬದ ಗಣಪತಿ ಎಂದು ಕರೆಯಲಾಗುವುದು. ಇಲ್ಲಿ ನಮಸ್ಕರಿಸಿದ ನಂತರ ಭಕ್ತಾದಿಗಳು ದೇವಸ್ಥಾನದ ಒಳಪ್ರಾಕಾರ ಪ್ರವೇಶಿಸಬೇಕು. ಶ್ರೀ ದೇವಳದ ಗರ್ಭಗುಡಿಯಲ್ಲಿ ಶಂಕ ಚಕ್ರ ವರದಾಭಯ ಹಸ್ತಗಳಿಂದ ಪದ್ಮಾಸನ ರೂಡಳಾಗಿ ಮಂದಸ್ಮಿತ ವದನದಿಂದ ಕೂಡಿದ ಪಂಚ ಲೋಹದ ಮೂಕಾಂಬಿಕಾ ದೇವಿಯನ್ನು ಮತ್ತು ದೇವಿಯ ಮುಂಭಾಗದಲ್ಲಿ ಸ್ವರ್ಣರೇಖಾಂಕಿತವಾದ ಸ್ವಯಂಭೂ(ತಾನಾಗಿ ಉದ್ಭವಿಸಿದ) ಲಿಂಗವನ್ನು ದರ್ಶಿಸಬೇಕು. ಭಕ್ತಾದಿಗಳು ಶ್ರೀ ದೇವಿಯ ದರ್ಶನದ ನಂತರ ಎಡಭಾಗಕ್ಕೆ ತಿರುಗಿ ಪ್ರದಕ್ಷಣಾ ಪಥವನ್ನು ಅನುಸರಿಸಬಹುದಾಗಿದೆ. ಗರ್ಭಗುಡಿಯ ದಕ್ಷಿಣಭಾಗದಲ್ಲಿ ದಶಭುಜ ಗಣಪತಿಯನ್ನು

ಕಾಣಬಹುದಾಗಿದೆ. ಒಳ ಪ್ರಾಂಗಣದ ನೈಋತ್ಯ ಭಾಗದಲ್ಲಿ ನಾವು ನಾಗನನ್ನು ಕಾಣಬಹುದು. ಪಶ್ಚಿಮ ಭಾಗದ ಗರ್ಭಗುಡಿಯ ಪಕ್ಕದಲ್ಲಿ ಆದಿಶಂಕರಾಚಾರ್ಯರ ಪೀಠವನ್ನು ಕಾಣಬಹುದು. ದೇವಿಯ ಹೊರ ಪ್ರಾಂಗಣದ ಪ್ರದಕ್ಷಿಣೆಯ ಪಥದಲ್ಲಿ ನಾವು ಆಕೆಯ ಪರಿವಾರ ದೇವತೆಗಳನ್ನು ಕಾಣಬಹುದು.

ಮೊದಲಿಗೆ ದೇವಸ್ಥಾನದ ಪೂರ್ವ ಭಾಗದಲ್ಲಿರುವ ವೀರಭದ್ರ ಸ್ವಾಮಿಗೆ ಪೂಜೆ ಸಲ್ಲಿಸಿ ನಂತರ ಸುಬ್ರಹ್ಮಣ್ಯ ದೇವವಿಗೆ ಪೂಜೆ ಸಲ್ಲಿಸಲಾಗುವುದು. ಹೊರಪ್ರಾಂಗಣದದ ದಕ್ಷಿಣ ಭಾಗದಲ್ಲಿ ಶ್ರೀ ಸರಸ್ವತಿ ಮಂಟಪವು ಇದ್ದು, ಇಲ್ಲಿ ಮಕ್ಕಳಿಗೆ ಮೊದಲು ವಿದ್ಯಾರಂಭ ಹಾಗೂ ಅನ್ನ ಪ್ರಾಶಾನವನ್ನು ಮಾಡಿಸುತ್ತಾರೆ. ಅಲ್ಲದೆ ಇಲ್ಲಿ ಸಂಗೀತ, ನರ್ತನ, ಸೇವೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯತ್ತವೆ. ಹೊರ ಪ್ರಾಂಗಣದ ಪಶ್ಚಿಮ ಭಾಗದಲ್ಲಿ ಶ್ರೀ ಪ್ರಾಣಲಿಂಗೇಶ್ವರ, ಶ್ರೀ ಪಾರ್ಥೇಶ್ವರ, ಶ್ರೀ ಪಂಚಮುಖಿ ಗಣಪತಿ, ಶ್ರೀ ಚಂದ್ರಮೌಳೇಶ್ವರ, ಶ್ರೀ ನಂಜುಂಡೇಶ್ವರ, ಶ್ರೀ ಆಂಜನೇಯ, ಶ್ರೀ ವೆಂಕಟರಮಣ ಮತ್ತು ತುಳಸಿ ಗೋಪಾಲಕೃಷ್ಣನ ಗುಡಿಗಳನ್ನು ಕಾಣಬಹುದಾಗಿದೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕೊಲ್ಲೂರು ಪುರವರಾಧೀಶ್ವರೀ ಶ್ರೀ ಚಂದ್ರಮೌಳೇಶ್ವರ ಸ್ವಾಮೀ ಸಮೇತ ಶ್ರೀ ಮೂಕಾಂಬಿಕಾ ದೇವೀ ಪರಬ್ರಹ್ಮಣ್ಯೈ ನಮಃ

ಪ್ರಣಾಮ ಸ್ತೋತ್ರ - ನಮಸ್ತೇ ಜಗದ್ಧಾತ್ರಿ ಸದ್ಬ್ರಹ್ಮರೂಪೇ | ನಮಸ್ತೇ ಹರೋಪೇಂದ್ರ
ಧಾತ್ರಾದಿವಂದೇ | ನಮಸ್ತೇ ಪ್ರಪನ್ನೇಷ್ಟದಾನೈಕದಕ್ಷೇ | ನಮಸ್ತೇ ಮಹಾಲಕ್ಷ್ಮಿ
ಕೋಲಾಪುರೇಶಿ ||

ದೇವಿಯ ಮೂಲಸ್ಥಳವು ಕೊಡಚಾದ್ರಿ ಶಿಖರದ ತುದಿಯ ಮೇಲಿದೆ ಮತ್ತು ಕೊಡಚಾದ್ರಿಯನ್ನು ಸಂಪೂರ್ಣವಾಗಿ ಚಾರಣಮಾಡಿಕೊಂಡು ಮೂಲಸ್ಥಳವನ್ನು ತಲುಪುವುದು ಸಾಮಾನ್ಯ ಜನರಿಗೆ ಅತ್ಯಂತ ಕಷ್ಟಕರವಾಗಿದ್ದರಿಂದ, ಶಂಕರಾಚಾರ್ಯರು ದೇವಸ್ಥಾನವನ್ನು ಕೊಲ್ಲೂರಿನಲ್ಲಿ ಪುನರ್-ಸ್ಥಾಪಿಸಿದರು ಎಂಬುದಾಗಿಯೂ ತಿಳಿಯುತ್ತದೆ.

ಸ್ನಾನ ಘಟ್ಟ - ಕೊಲ್ಲೂರಿನಲ್ಲಿ ಕಾಶಿ ತೀರ್ಥ ಮತ್ತು ಅಗ್ನಿ ತೀರ್ಥ ಎಂಬ ಎರಡು ನದಿಗಳು ಹರಿಯುತ್ತಿದೆ. ಇವೆರಡು ನದಿಗಳು ಕೊಲ್ಲೂರಿನಲ್ಲಿ ಒಂದಾಗಿ ಸೌಪರ್ಣಿಕಾ ನದಿಯಾಗಿ ಹರಿಯುತ್ತಿದ್ದು ಇದಕ್ಕೆ ಶ್ರೀ ದೇವಳದಿಂದ 0.5 ಕಿ,ಮೀ ದೂರದಲ್ಲಿ ನದಿಯ ತಟದಲ್ಲಿ ಸ್ನಾನ

ಘಟ್ಟವನ್ನು ನಿರ್ಮಿಸಲಾಗಿದೆ ಮತ್ತು ಕಾಶಿ ತೀರ್ಥ ನದಿಯ ತಟದಲ್ಲಿಯೂ ಸ್ನಾನ ಘಟ್ಟದ ವ್ಯವಸ್ಥೆ ಇರುತ್ತದೆ.

ದರ್ಶನ ಸಮಯ : ಬೆಳಿಗ್ಗೆ 5.00 ಘಂಟೆ ಯಿಂದ ಮಧ್ಯಾಹ್ನ 1.30 ಘಂಟೆಯತನಕ ಮತ್ತು ಮಧ್ಯಾಹ್ನ 3.00 ಘಂಟೆ ಯಿಂದ ರಾತ್ರಿ 9.00 ಘಂಟೆಯತನಕ.

ವಿಶೇಷ ಉತ್ಸವಗಳು - ಪ್ರತೀ ದಿನ ದೇವಸ್ಥಾನದಲ್ಲಿ ಚಂಡಿಕಾ ಹೋಮದ ಸೇವೆಯನ್ನು ನಡೆಸುತ್ತಾರೆ. ನವರಾತ್ರಿ ಆಚರಣೆ ಒಂದು ಜನಪ್ರಿಯ ಉತ್ಸವ. ಕೊನೆಯ ದಿನ ವಿದ್ಯಾರಂಭದ ಕೈಂಕರ್ಯವನ್ನು ನಡೆಸುತ್ತಾರೆ ಅಥವಾ ಯಾವುದೇ ಸೂಕ್ತವಾದ ದಿನದಂದು ನಡೆಸಬಹುದು. ಮಹಾನವಮಿ ದಿನ ಪುಷ್ಪರಥೋತ್ಸವವನ್ನು ಮಾಡುತ್ತಾರೆ. ವಾರ್ಷಿಕ ಮಹಾ ರಥೋತ್ಸವವು ಪ್ರತೀ ವರ್ಷ ಮಾರ್ಚ ಅಥವಾ ಎಪ್ರಿಲ್ ತಿಂಗಳಲ್ಲಿ ಒಂಬತ್ತು ದಿನಗಳ ಕಾಲ ನಡೆಯುತ್ತದೆ. ಕಾರ್ತಿಕ ಹುಣ್ಣಿಮೆ ಮತ್ತು ಕಾರ್ತಿಕ ಅಮವಾಸ್ಯೆಯಂದು ದೀಪೋತ್ಸವವು ತುಂಭಾ ವಿಜೃಂಭಣೆಯಿಂದ ನಡೆಯುತ್ತವೆ.

ಇಲ್ಲಿ ಪ್ರತಿದಿನದ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಭಕ್ತರಿಗೆ ಅನ್ನದಾನವನ್ನು ಮಾಡಲಾಗುತ್ತದೆ. ಕೊಲ್ಲೂರಿನಲ್ಲಿ ಹಲವಾರು ವಸತಿ-ಸೌಕರ್ಯಗಳು ಲಭ್ಯವಿವೆ.

**ಹತ್ತಿರದ ಪ್ರೇಕ್ಷಣೀಯ ಸ್ಥಳಗಳು** - 37 ಕಿ.ಮೀ ದೂರದಲ್ಲಿರುವ ಕೊಡಚಾದ್ರಿ ಪರ್ವತ ಶ್ರೇಣಿಯನ್ನು ಪುರಾಣಗಳು ಸಂಜೀವಿನಿ ಪರ್ವತವೆಂದು ವರ್ಣಿಸುತ್ತದೆ. ಕೊಡಚಾದ್ರಿಯಲ್ಲಿ ಪರ್ವತೇಶ್ವರ, ಕಾಲಭೈರವ ಮತ್ತು ಪಾರ್ವತಿ ದೇವಿಯ ಗುಡಿಗಳನ್ನು ಹಾಗೂ ಗಣಪತಿ ಗುಹೆಯನ್ನು ಕಾಣಬಹುದು. ಹಾಗೆ ಮೇಲೆರಿದರೆ ಕಾಣ ಸಿಗುವುದು ಸರ್ವಜ್ಞ ಪೀಠ, ಇದನ್ನು ಶ್ರೀ ಶಂಕರಾಚಾರ್ಯರು ಸ್ಥಾಪಿಸಿದರು. ಸರ್ವಜ್ಞ ಪೀಠಕ್ಕಿಂತ 2 ಕಿ.ಮೀ ಮೊದಲು ಮೂಲ ಮೂಕಾಂಬಿಕ ದೇವಸ್ಥಾನವಿದೆ. ಸರ್ವಜ್ಞ ಪೀಠದಿಂದ ಮುಂದಕ್ಕೆ ಕಡಿದಾದ ಬೆಟ್ಟವನ್ನು ಇಳಿದರೆ ಚಿತ್ರಮೂಲ ಎಂಬ ಸ್ಥಳ ತಲುಪಬಹುದು. ಇದು ಸೌಪರ್ಣಿಕ ನದಿಯ ಉಗಮ ಸ್ಥಾನ. ಕೊಡಚಾದ್ರಿ ಬೆಟ್ಟವನ್ನು ತಲುಪಲು ತೀರ ಕಡಿದಾದ, ಕಚ್ಚಾ ರಸ್ತೆಯ ಸೌಲಭ್ಯವಿದೆ. (ಜೀಪಿನಲ್ಲಿ ಮಾತ್ರ ಹೋಗಬಹುದು). ಕೊಲ್ಲೂರಿನಿಂದ ಪ್ರತಿ ಅರ್ಧ ಗಂಟೆಗೊಮ್ಮೆ ಜೀಪ್ ಸರ್ವಿಸ್ ಇದೆ.

**ಪ್ರೇಕ್ಷಣೀಯ ಸ್ಥಳಗಳು** - ಅರಶಿನ ಗುಂಡಿ ಜಲಪಾತ 10 ಕಿ.ಮೀ, ಆನೆಜರಿ 5 ಕಿ.ಮೀ, ಬೆಳಕಲ್ ತೀರ್ಥ 23. ಕಿ.ಮೀ, ಮೂಡಗಲ್ 20 ಕಿ.ಮೀ,

## 2. ವಿನಾಯಕ ದೇವಸ್ಥಾನ ಆನೆಗುಡ್ಡೆ

ಕುಂದಾಪುರದಿಂದ 9 ಕಿ.ಮೀ ದೂರದಲ್ಲಿರುವ ಕುಂಭಾಶಿಯ ಆನೆಗುಡ್ಡೆಯಲ್ಲಿ ಈ ದೇವಸ್ಥಾನ ನೆಲೆಸಿದೆ. ಇದು ಶಾಂತಿಯುತ ವಾತಾವರಣದೊಂದಿಗೆ ಈ ಪ್ರದೇಶದ ಅತ್ಯಂತ ಸುಂದರವಾದ ದೇವಾಲಯವಾಗಿದೆ. ಇದು ತುಳುನಾಡಿನ 'ಸಪ್ತಕ್ಷೇತ್ರ' ಗಳಲ್ಲಿ ಒಂದಾಗಿದೆ ಮತ್ತು ಇದನ್ನು "ಮುಕ್ತಿ ಸ್ಥಳ" ಎಂದೂ ಕರೆಯುತ್ತಾರೆ.

ಮುಖ್ಯ ಗರ್ಭಗೃಹದಲ್ಲಿರುವ ಚತುರ್ಭುಜನಾದ (4 ತೋಳುಗಳೊಂದಿಗೆ) ಕಪ್ಪುಕಲ್ಲಿನ ಭಗವಾನ್ ವಿನಾಯಕ ಮೂರ್ತಿಯನ್ನು ಬೆಳ್ಳಿಯ ರಕ್ಷಾಕವಚದಲ್ಲಿ ಮುಚ್ಚಿದೆ. ಎರಡು ತೋಳುಗಳು "ವರದ ಹಸ್ತ" ವರಗಳನ್ನು ನೀಡುತ್ತಿವೆ ಮತ್ತು ಎರಡು ಕೈಗಳು ಮೋಕ್ಷವನ್ನು ಸಾಧಿಸಲು ಸೂಚಿಸುತ್ತವೆ. ದೇವಾಲಯದ ಸುತ್ತಲೂ ಭಾರ್ಗವ ಪುರಾಣದ ಶಿಲ್ಪಕಲೆಗಳಿವೆ.

ತುಲಾಭಾರ ಸೇವೆ ಅಂದರೆ ಒಬ್ಬ ವ್ಯಕ್ತಿಗೆ ಸಮನಾದ ತೂಕದಲ್ಲಿ ಅಮೂಲ್ಯವಾದ ವಸ್ತುಗಳನ್ನು ದೇವರಿಗೆ ಅರ್ಪಿಸುವ ಪದ್ಧತಿಯನ್ನು ಈ ದೇವಾಲಯದಲ್ಲಿ ಆಗಾಗ್ಗೆ ಭಕ್ತರು ಮಾಡುತ್ತಾರೆ. ಮದುವೆ, ನಾಮಕರಣ ಸಮಾರಂಭ ಮುಂತಾದ ಶುಭ ಸಮಾರಂಭಗಳೂ ಇಲ್ಲಿ ನಡೆಯುತ್ತವೆ.

ದರ್ಶನ ಸಮಯ : ಬೆಳಿಗ್ಗೆ 7.00 ಘಂಟೆ ಯಿಂದ ರಾತ್ರಿ 8.00 ಘಂಟೆ

ಪ್ರಣಾಮ ಮಂತ್ರ - ಓಂ ಶ್ರೀ ಕುಂಭಾಸಿಪುರವರಾಧೀಶ್ವರ ಶ್ರೀ ಸಿದ್ಧಿ ಬುದ್ಧಿ ದೇವೀ ಸಮೇತ ಆನೆಗುಡ್ಡೆ ಶ್ರೀ ವಿನಾಯಕ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಪ್ರಣಮ್ಯ ಶಿರಸಾ ದೇವಂ ಗೌರೀಪುತ್ರಂ ವಿನಾಯಕಂ |
ಭಕ್ತಾವಾಸಂ ಸ್ಮರೇನ್ನಿತ್ಯಂ ಆಯುಃ ಕಾಮಾರ್ಥ ಸಿದ್ಧಯೆ ||

ವಿನಾಯಕನ ಆಶೀರ್ವಾದ ಪಡೆಯಲು ದೂರದ ಸ್ಥಳಗಳಿಂದ ಜನರು ಇಲ್ಲಿಗೆ ಬರುತ್ತಾರೆ. ಪ್ರತಿ ಚಾಂದ್ರಮಾನ ಮಾಸದ ಚೌತಿ / ಚತುರ್ಥಿ (ಹುಣ್ಣಿಮೆಯ ನಂತರ 4 ನೇ ದಿನ), ದೇವಾಲಯದಲ್ಲಿ ವಿಶೇಷ ಪೂಜೆಗಳನ್ನು ನಡೆಸಲಾಗುತ್ತದೆ. ಗಣೇಶ ಚತುರ್ಥಿಯನ್ನು ಬಹಳ ವೈಭವದಿಂದ ಆಚರಿಸಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ, ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥ ಸ್ವಾಮೀಜಿ ಅವರು ಬೃಹತ್ ಊಟದ ಮನೆಗಳನ್ನು ಉದ್ಘಾಟಿಸಿದರು. ಭಕ್ತರಿಗೆ ಪ್ರತಿದಿನ ಮಧ್ಯಾಹ್ನ 'ಮಹಾ ಪ್ರಸಾದ' ನೀಡಲಾಗುತ್ತದೆ. ವಸತಿ ಸೌಲಭ್ಯ ಇದೆ.

## 3. ಬ್ರಾಹ್ಮೀ ದುರ್ಗಾಪರಮೇಶ್ವರೀ ದೇವಾಲಯ, ಕಮಲಶಿಲೆ

ಕಮಲಶಿಲೆ ಉಡುಪಿ ಜಿಲ್ಲೆಯ ಕುಂದಾಪುರದಿಂದ 35 ಕಿ.ಮೀ ದೂರದಲ್ಲಿದೆ. ಕುಬ್ಜಾ ನದಿಯ ದಂಡೆಯಲ್ಲಿರುವ ಕಮಲಶಿಲೆ ಸುಂದರವಾದ ಪರ್ವತಗಳು ಮತ್ತು ನಿತ್ಯಹರಿದ್ವರ್ಣ ಕಾಡುಗಳಿಂದ ಆವೃತವಾಗಿದೆ.

ಕಮಲಶಿಲೆ ಹಳ್ಳಿಯ ಹೃದಯಭಾಗದಲ್ಲಿರುವ ಪ್ರಾಚೀನ ಬ್ರಾಹ್ಮಿ ದುರ್ಗಪರಮೇಶ್ವರಿ ದೇವಸ್ಥಾನಕ್ಕೆ ಹೆಸರುವಾಸಿಯಾಗಿದೆ. ಕಮಲಶಿಲೆ ಎಂಬ ಹೆಸರು ಕಲ್ಲಿನ ಲಿಂಗದಿಂದ ಬಂದಿದೆ. ಮಹಾಕಾಳಿ, ಮಹಾ ಸರಸ್ವತಿ ಮತ್ತು ಮಹಾ ಲಕ್ಷ್ಮಿ ದೇವತೆಗಳ ಒಮ್ಮುಖ ಎಂದು ಹೇಳಲಾಗುವ ಬ್ರಾಹ್ಮಿ ದುರ್ಗಾಪರಮೇಶ್ವರಿ ದೇವಿಯನ್ನು ಲಿಂಗ ರೂಪದಲ್ಲಿ ಪೂಜಿಸಲಾಗುತ್ತದೆ.

2 ಕಿಮಿ ದೂರದಲ್ಲಿರುವ ನೋಡಲೇಬೇಕಾದ ಸುಪಾರ್ಶ್ವ ಗುಹೆಯಲ್ಲಿ ಶ್ರೀಧರ ಸಾಮಿಗಳು ತಪಸ್ಸನ್ನು ಆಚರಿಸಿರುವರು.

ದರ್ಶನ ಸಮಯ - ಬೆಳಿಗ್ಗೆ 7:00 ರಿಂದ ರಾತ್ರಿ 8:30

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕಮಲಶಿಲೆ ಪುರವರಾಧೀಶ್ವರೀ ಶ್ರೀ ಈಶ್ವರ ಸ್ವಾಮೀ ಸಮೇತ ಶ್ರೀ ಬ್ರಾಹ್ಮಿ ದುರ್ಗಾಪರಮೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ

ಪ್ರಣಾಮ ಸ್ತೋತ್ರ - ಸರ್ವಸ್ವರೂಪೇ ಸರ್ವೇಶೇ ಸರ್ವ ಶಕ್ತಿ ಸಮನ್ವಿತೇ |
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇ ದೇವಿ ನಮೋಸ್ತುತೆ ||

ಉತ್ಸವಗಳು - ನವರಾತ್ರಿ ಉತ್ಸವ, ಲಕ್ಷ ದೀಪೋತ್ಸವ ಮತ್ತು ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ವಾರ್ಷಿಕ ರಥೋತ್ಸವ ನಡೆಯುತ್ತದೆ.

ಭಕ್ತರಿಗಾಗಿ ಸೌಲಭ್ಯಗಳು - ಬೆಳಿಗ್ಗೆ ಮಧ್ಯಾಹ್ನ ಮತ್ತು ಸಂಜೆ ಎಲ್ಲಾ ಭಕ್ತರಿಗೆ ಉಚಿತ ಭೋಜನ ಸೌಲಭ್ಯ ಲಭ್ಯವಿದೆ. ಕಲ್ಯಾಣ ಮಂಟಪ ಮದುವೆ ಮುಂಜಿ ಚೌಳ ಮತ್ತು ಇತರೆ ಧಾರ್ಮಿಕ ಕೆಲಸಗಳಿಗೆ ಲಭ್ಯವಿದೆ. ಕಮಲಶಿಲೆ ದೇವಸ್ಥಾನದಲ್ಲಿ ವಸತಿ ಸೌಲಭ್ಯಗಳು ಲಭ್ಯವಿದೆ.

ಹತ್ತಿರದ ದೇವಸ್ಥಾನಗಳು - ಮಾರಣಕಟ್ಟೆ ಶ್ರೀ ಬ್ರಹ್ಮಲಿಂಗೇಶ್ವರ ದೇವಸ್ಥಾನ, ಚಿತ್ತೂರು, ಗುಡ್ಡೆಮ್ಮಾಡಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಸೇನಾಪುರ, ಗುಡ್ಡೆಟ್ಟು ಶ್ರೀ ವಿನಾಯಕ ದೇವಸ್ಥಾನ, ಯಡಾಡಿ-ಮತ್ಯಾಡಿ

## 4. ಶ್ರೀ ಕೃಷ್ಣ ದೇವಸ್ಥಾನ ಉಡುಪಿ

ಕೃಷ್ಣ ಮಠ ಎಂದೂ ಕರೆಯಲಾಗುವ ಕರ್ನಾಟಕದ ಪ್ರಸಿದ್ಧ ಯಾತ್ರಾಸ್ಥಳಗಳಲ್ಲಿ ಒಂದಾದ ಉಡುಪಿಯಲ್ಲಿದೆ. ದೇವಾಲಯದ ವಾಸ್ತುಶಿಲ್ಪವು ಕೇರಳ ಶೈಲಿಯಲ್ಲಿದೆ ಮತ್ತು ಗರ್ಭಗುಡಿಯ ಸುತ್ತ ಹಲವಾರು ಪ್ರಾಕಾರಗಳನ್ನು ಹೊಂದಿದೆ. ಇಲ್ಲಿರುವ ಕೃಷ್ಣನ ಪ್ರತಿಮೆಯನ್ನು ಜಗದ್ಗುರು ಶ್ರೀ ಮಧ್ವಾಚಾರ್ಯರು 13 ನೇ ಶತಮಾನದಲ್ಲಿ ಸ್ಥಾಪಿಸಿದರು. ಇವರು ದ್ವೈತ ವೇದಾಂತ ಶಾಖೆಯ ಸ್ಥಾಪಕರೂ ಕೂಡ. ವಿಗ್ರಹವು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯದ ಪೂಜೆಯನ್ನು ಉಡುಪಿಯಲ್ಲಿರುವ ಅಷ್ಟ ಮಠಗಳು ನೋಡಿಕೊಳ್ಳುತ್ತವೆ. ಪ್ರತಿ ಎರಡು ವರ್ಷಗಳಿಗೊಮ್ಮೆ ಒಂದು ಮಠದಿಂದ ಇನ್ನೊಂದು ಮಠಕ್ಕೆ ಕೃಷ್ಣ ಮಠದ ಪೂಜೆ ಹಸ್ತಾಂತರವಾಗುತ್ತದೆ. ಈ ಸಂದರ್ಭವನ್ನು ಪರ್ಯಾಯ ಮಹೋತ್ಸವ ಎಂದು ಅತಿ ವೈಭವದಿಂದ ಆಚರಿಸಲಾಗುತ್ತದೆ. ಭಕ್ತರು ದೇವರ ದರ್ಶನವನ್ನು ಒಳಗಿನ ನವಗ್ರಹ ಕಿಂಡಿ ಅಥವಾ ಹೊರಗಿನ ಕನಕನ ಕಿಂಡಿಯ ಮೂಲಕ ಪಡೆಯಬಹುದು. ಮಠವು ಬೆಳಗಿನ ಜಾವ 5:30ಕ್ಕೆ ತೆರೆಯುತ್ತದೆ. ದೇವರಿಗೆ 9 ತೂತುಗಳಿರುವ ಬೆಳ್ಳಿಯಿಂದ ಲೇಪಿತವಾದ ಕಿಂಡಿಯಿಂದ ಪೂಜೆ ಮಾಡುವುದು ಇಲ್ಲಿನ ವಿಶೇಷತೆ. ಪ್ರತಿದಿನ ಬಂದ ಭಕ್ತರಿಗೆ ಮಧ್ಯಾಹ್ನದ ಊಟದ ವ್ಯವಸ್ಥೆಯೂ ಇಲ್ಲಿದೆ.

ಸುಂದರವಾದ ಮಾಧ್ವ ಸರೋವರ, ಚಿನ್ನದ ರಥ, ಅಷ್ಟ ಮಠಗಳಾದ ಪುತ್ತಿಗೆ, ಪೇಜಾವರ, ಪಲಿಮಾರು, ಅದಮಾರು, ಶಿರೂರು, ಸೋಧೆ, ಕೃಷ್ಣಪುರ ಮತ್ತು ಕಾಣಿಯೂರು, ಅನಂತೇಶ್ವರ ಮತ್ತು ಚಂದ್ರಮೌಳೀಶ್ವರ ದೇವಸ್ಥಾನ, ಸಂಸ್ಕೃತ ಪಾಠಶಾಲೆ, ಕನಕದಾಸ ಮಂಟಪ ಇವು ದೇವಾಲಯದ ಸುತ್ತಲೂ ಇವೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಉಡುಪಿಪುರವರಾಧೀಶ್ವರ ದೇವದೇವೋತ್ತಮ ಸಾರ್ವಭೌಮ ಶ್ರೀ ಕೃಷ್ಣ ಪರಮಾತ್ಮನೇ ನಮೋ ನಮಃ ||

ಪ್ರಣಾಮ ಸ್ತೋತ್ರ - ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ |
ಪ್ರಣತಃ ಕ್ಲೇಶ ನಾಶಾಯ ಗೋವಿಂದಾಯ ನಮೋ ನಮಃ ||

**ಹತ್ತಿರದ ಪ್ರೇಕ್ಷಣೀಯ ಸ್ಥಳಗಳು** - ಕೌಪ್ ಬೀಚ್ ಮತ್ತು ಕೌಪ್ ಲೈಟ್ ಹೌಸ್, ಮಾಲ್ಪೆ ಬೀಚ್, ಸೇಂಟ್ ಮೇರಿ ದ್ವೀಪಗಳು, ಕಾರ್ಪೊರೇಷನ್ ಬ್ಯಾಂಕ್ ನಾಣ್ಯ ಸಂಗ್ರಹಾಲಯ,

## 5. ಮಂದಾರ್ತಿ ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ

ಮಂದಾರ್ತಿ ಶ್ರೀ ದುರ್ಗಾ ಪರಮೇಶ್ವರಿ ಕ್ಷೇತ್ರವು ಉಡುಪಿಯಿಂದ 25 ಕಿ.ಮೀ ದೂರದಲ್ಲಿರುವ ಅತ್ಯಂತ ಪ್ರಾಚೀನ ಧಾರ್ಮಿಕ ಕ್ಷೇತ್ರವಾಗಿದೆ. ಇಲ್ಲಿ ನಾಗತೀರ್ಥ ಪುಷ್ಕರಿಣಿ, ದೇವಾಲಯದ ಪಕ್ಕದಲ್ಲಿದೆ. ವಸತಿ ಮತ್ತು ಭೋಜನ ಸೌಲಭ್ಯ ಇದೆ. ಎಲ್ಲಾ ಭಕ್ತರಿಗೆ ಪ್ರಸಾದಂ ಭೋಜನವನ್ನು ಮಧ್ಯಾಹ್ನ 1 ಗಂಟೆಗೆ ಮತ್ತು ರಾತ್ರಿ 8 ಗಂಟೆಗೆ ನೀಡಲಾಗುತ್ತದೆ.

ರಾಜ್ಯದಾದ್ಯಂತದ ಭಕ್ತರು ಮಂದಾರ್ತಿ ದುರ್ಗಪರಮೇಶ್ವರಿ ದೇವಸ್ಥಾನದಲ್ಲಿ ಇಷ್ಟಾರ್ಥ ಪೂರೈಕೆಗಾಗಿ ಯಕ್ಷಗಾನ ಹರಕೆ ಸೇವೆಯನ್ನು ಅರ್ಪಿಸುತ್ತಾರೆ. ಒಂದು ಶತಮಾನಕ್ಕೂ ಹೆಚ್ಚು ಹಳೆಯದಾದ ಯಕ್ಷಗಾನ ತಂಡ, ಮಂದಾರ್ತಿ ಶ್ರೀ ದುರ್ಗಪರಮೇಶ್ವರಿ ದಶವತಾರ ಯಕ್ಷಗಾನ ಮೇಳವು ತನ್ನ ದೈನಂದಿನ "ಹರಕೆ ಆಟಾ" ಅಥವಾ ದೇವಿಯ ಸೇವೆಗಾಗಿ ಯಕ್ಷಗಾನ ಪ್ರದರ್ಶನಗಳನ್ನು ವರ್ಷಪೂರ್ತಿ ಮಂದಾರತಿಯಲ್ಲಿ ಪ್ರದರ್ಶಿಸುತ್ತಿದೆ. ಕ್ಷೇತ್ರವು ಪ್ರಸಕ್ತದಲ್ಲಿ ಐದು ಯಕ್ಷಗಾನ ಮೇಳಗಳನ್ನು ಹೊಂದಿದ್ದು, ಭಕ್ತರು ಹರಕೆಯಾಟವನ್ನು ತಾವು ಇಚ್ಚಿಸಿದ ಸ್ಥಳದಲ್ಲಿ ಆಟ ಆಡಿಸಲು ಅನುಕೂಲವಾಗುವಂತೆ ಐದು ವಾಹನ (ಬಸ್)ಗಳನ್ನು ಕ್ಷೇತ್ರವು ಹೊಂದಿರುತ್ತದೆ. ಯಕ್ಷಗಾನ ಕಲಾವಿದರು ರಾಮಾಯಣ, ಮಾಹಾಭಾರತದಲ್ಲಿ ಬರುವ ವಿವಿಧ ಕಥಾಪ್ರಸಂಗಳಲ್ಲದೆ, ಶ್ರೀ ದೇವಿಯ ಸ್ಥಳಪುರಾಣದ ಕಥೆಗಳನ್ನು ಆಡಿ ತೋರಿಸುತ್ತಾರೆ. ಒಂದು ಮೇಳದಲ್ಲಿ ಹಿಮ್ಮೇಳ, ಮುಮ್ಮೇಳ ಮತ್ತು ಹೊರೆಯಾಳುಗಳನ್ನೊಳಗೊಂಡು ಒಟ್ಟು 45 ಜನರು ಕಾರ್ಯನಿರ್ವಹಿಸುತ್ತಿರುತ್ತಾರೆ.

ದರ್ಶನದ ಸಮಯ - ಮುಂಜಾನೆ 5.30 ರಿಂದ ರಾತ್ರಿ 8.00 ಘಂಟೆ

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಮಂದಾರ್ತಿ ಪುರವರಾಧೀಶ್ವರೀ ಶ್ರೀ ಈಶ್ವರ ಸ್ವಾಮೀ ಸಮೇತ ಶ್ರೀ ದುರ್ಗಾಪರಮೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ

ಪ್ರಣಾಮ ಸ್ತೋತ್ರ - ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ |
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮೃತಾಂ ||

ಉತ್ಸವಗಳು - ನವರಾತ್ರಿ ಉತ್ಸವ, ಕುಂಭಮಾಸದಲ್ಲಿ ರಥೋತ್ಸವ

ಭಕ್ತರಿಗಾಗಿ ಸೌಲಭ್ಯಗಳು - ಬೆಳಿಗ್ಗೆ ಮಧ್ಯಾಹ್ನ ಮತ್ತು ಸಂಜೆ ಎಲ್ಲಾ ಭಕ್ತರಿಗೆ ಉಚಿತ ಭೋಜನ ಸೌಲಭ್ಯ ಲಭ್ಯವಿದೆ. ಮಂದಾರ್ತಿ ದೇವಸ್ಥಾನದಲ್ಲಿ ವಸತಿ ಸೌಲಭ್ಯಗಳು ಇವೆ.

ಈಗ ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

## 6. ಉಡುಪಿ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಗುರುನರಸಿಂಹ ದೇವಸ್ಥಾನ, ಸಾಲಿಗ್ರಾಮ, ಉಡುಪಿ ತಾಲ್ಲೂಕು
2. ಶ್ರೀ ಅನಂತ ಪದ್ಮನಾಭ ದೇವಸ್ಥಾನ, ಪೆರ್ಡೂರು, ಉಡುಪಿ ತಾಲ್ಲೂಕು
3. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಪಡುಬಿದ್ರಿ, ಉಡುಪಿ ತಾಲ್ಲೂಕು
4. ಶ್ರೀ ಜನಾರ್ಧನ ಮತ್ತು ಮಹಾಕಾಳಿ ದೇವಸ್ಥಾನ, ಅಂಬಲಪಾಡಿ, ಉಡುಪಿ ತಾಲ್ಲೂಕು
5. ಶ್ರೀ ಅನಂತೇಶ್ವರ ಮತ್ತು ಚಂದ್ರಮೌಳಿಶ್ವರ ದೇವಸ್ಥಾನ, ಉಡುಪಿ ತಾಲ್ಲೂಕು
6. ಶ್ರೀ ಜನಾರ್ಧನ ದೇವಸ್ಥಾನ, ಕಾಪು, ಉಡುಪಿ ತಾಲ್ಲೂಕು
7. ಶ್ರೀ ಮಹಿಷಮರ್ದಿನಿ ದೇವಸ್ಥಾನ, ನೀಲಾವರ, ಉಡುಪಿ ತಾಲ್ಲೂಕು
8. ಶ್ರೀ ಅಮೃತೇಶ್ವರ ದೇವಸ್ಥಾನ, ಕೋಟ, ಉಡುಪಿ ತಾಲ್ಲೂಕು
9. ಶ್ರೀ ವೀರಭದ್ರ ದೇವಸ್ಥಾನ, ಹಿರಿಯಡ್ಕ, ಉಡುಪಿ ತಾಲ್ಲೂಕು
10. ಶ್ರೀ ವಿಶ್ವೇಶ್ವರ ದೇವಸ್ಥಾನ, ಎಲ್ಲೂರು, ಉಡುಪಿ ತಾಲ್ಲೂಕು
11. ಶ್ರೀ ಮಹಿಷಮರ್ದಿನಿ ದೇವಸ್ಥಾನ, ಕಡಿಯಾಳಿ, ಉಡುಪಿ ತಾಲ್ಲೂಕು
12. ಶ್ರೀ ಹೊಸ ಮಾರಿಗುಡಿ ದೇವಸ್ಥಾನ, ಕಾಪು, ಉಡುಪಿ ತಾಲ್ಲೂಕು
13. ಶ್ರೀ ಮೂರನೇ ಮಾರಿಯಮ್ಮ ದೇವಸ್ಥಾನ, ಕಾಪು, ಉಡುಪಿ ತಾಲ್ಲೂಕು
14. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಉಚ್ಚಿಲ, ಉಡುಪಿ ತಾಲ್ಲೂಕು
15. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಬನ್ನಂಜೆ, ಉಡುಪಿ ತಾಲ್ಲೂಕು
16. ಶ್ರೀ ಸಿದ್ಧಿ ವಿನಾಯಕ ದೇವಸ್ಥಾನ, ಉಪ್ಪೂರು, ಉಡುಪಿ ತಾಲ್ಲೂಕು
17. ಶ್ರೀ ರವಿಷ್ಣುಮೂರ್ತಿ ದೇವಸ್ಥಾನ, ಆರೂರು, ಉಡುಪಿ ತಾಲ್ಲೂಕು
18. ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ನಂದಿಕೂರು, ಉಡುಪಿ ತಾಲ್ಲೂಕು
19. ಶ್ರೀ ಜಯದುರ್ಗಾಪರಮೇಶ್ವರಿ ದೇವಸ್ಥಾನ, ಕನ್ನರ್ಪಾಡಿ, ಉಡುಪಿ ತಾಲ್ಲೂಕು
20. ಶ್ರೀ ದುರ್ಗಾದೇವಿ ದೇವಸ್ಥಾನ, ಕುಂಜೂರು, ಉಡುಪಿ ತಾಲ್ಲೂಕು

21. ಮಾರಣಕಟ್ಟೆ ಶ್ರೀ ಬ್ರಹ್ಮಲಿಂಗೇಶ್ವರ ದೇವಸ್ಥಾನ, ಚಿತ್ತೂರು, ಕುಂದಾಪುರ ತಾಲ್ಲೂಕು
22. ಗುಡ್ಡೆಮ್ಮಾಡಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಸೇನಾಪುರ, ಕುಂದಾಪುರ ತಾಲ್ಲೂಕು
23. ಗುಡ್ಡೆಟ್ಟು ಶ್ರೀ ವಿನಾಯಕ ದೇವಸ್ಥಾನ, ಯಡಾಡಿ-ಮತ್ಯಾಡಿ, ಕುಂದಾಪುರ ತಾಲ್ಲೂಕು
24. ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಉಪ್ಪುಂದ, ಕುಂದಾಪುರ ತಾಲ್ಲೂಕು
25. ಶ್ರೀ ಕೋಟಿಲಿಂಗೇಶ್ವರ ದೇವಸ್ಥಾನ, ಕೋಟೇಶ್ವರ, ಕುಂದಾಪುರ ತಾಲ್ಲೂಕು
26. ಶ್ರೀ ಮಹಾರಾಜಸ್ವಾಮಿ ದೇವಸ್ಥಾನ, ಮರವಂತೆ, ಕುಂದಾಪುರ ತಾಲ್ಲೂಕು
27. ಶ್ರೀ ಶಂಕರನಾರಾಯಣ ದೇವಸ್ಥಾನ, ಶಂಕರನಾರಾಯಣ, ಕುಂದಾಪುರ ತಾಲ್ಲೂಕು
28. ಶ್ರೀ ತಮಹಾಲಿಂಗೇಶ್ವರ ಮತ್ತು ಕಾಳಾಂಗ ದೇವಸ್ಥಾನ, ಕಾಳವರ, ಕುಂದಾಪುರ ತಾಲ್ಲೂಕು
29. ಶ್ರೀ ಅಗಸ್ತ್ಯೇಶ್ವರ ದೇವಸ್ಥಾನ, ಕಿರಿಮಂಜೇಶ್ವರ, ಕುಂದಾಪುರ ತಾಲ್ಲೂಕು
30. ಶ್ರೀ ಸೇನೇಶ್ವರ ದೇವಸ್ಥಾನ, ಬೈಂದೂರು, ಕುಂದಾಪುರ ತಾಲ್ಲೂಕು
31. ಶ್ರೀ ಕುಂದೇಶ್ವರ ದೇವಸ್ಥಾನ, ವಡೇರ ಹೋಬಳಿ, ಕುಂದಾಪುರ ತಾಲ್ಲೂಕು
32. ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಸೌಕೂರು, ಕುಂದಾಪುರ ತಾಲ್ಲೂಕು
33. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕುಂಭಾಸಿ, ಕುಂದಾಪುರ ತಾಲ್ಲೂಕು
34. ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಮುಂಡ್ಕೂರು, ಕಾರ್ಕಳ ತಾಲ್ಲೂಕು
35. ಶ್ರೀ ಲಕ್ಷ್ಮೀ ಜನಾರ್ಧನ ದೇವಸ್ಥಾನ, ಎಳ್ಳಾರೆ, ಕಾರ್ಕಳ ತಾಲ್ಲೂಕು
36. ಕೆಮ್ಮಣ್ಣು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ನಿಟ್ಟೆ, ಕಾರ್ಕಳ ತಾಲ್ಲೂಕು
37. ನಾಡ್ಪಾಲ್ ಶ್ರೀ ಮಹಾಗಣಪತಿ ದೇವಸ್ಥಾನ, ಸೋಮೇಶ್ವರ, ಕಾರ್ಕಳ ತಾಲ್ಲೂಕು
38. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಮಿಯ್ಯಾರು, ಕಾರ್ಕಳ ತಾಲ್ಲೂಕು
39. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಪೆರ್ವಾಜೆ, ಕಾರ್ಕಳ ತಾಲ್ಲೂಕು
40. ಶ್ರೀ ಮಾರಿಯಮ್ಮ ದೇವಸ್ಥಾನ, ಕಾರ್ಕಳ ತಾಲ್ಲೂಕು

# 4. ಚಿಕ್ಕಮಗಳೂರು ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಚಿಕ್ಕಮಗಳೂರು ಒಂದು ದಕ್ಷಿಣಒಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ದಕ್ಷಿಣಕನ್ನಡ, ಉಡುಪಿ, ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ ಮತ್ತು ಹಾಸನ ಜಿಲ್ಲೆಗಳು ಸುತ್ತುವರಿದಿವೆ. ಚಿಕ್ಕಮಗಳೂರು ಪಟ್ಟಣವು ಜಿಲ್ಲಾ ಕೇಂದ್ರ. ಅಜ್ಜಂಪುರ, ಚಿಕ್ಕಮಗಳೂರು, ಕಡೂರ, ಕೊಪ್ಪ, ಮೂಡಿಗೇರೆ, ನರಸಿಂಹರಾಜಪುರ, ಶೃಂಗೇರಿ, ತರಿಕೆರೆ ಎಂಬ 8 ತಾಲ್ಲೂಕುಗಳನ್ನು ಹೊಂದಿದೆ.

ಭಾರತದಲ್ಲಿ ಮೊಟ್ಟಮೊದಲು ಕಾಫಿ ಬೆಳೆದ ಸ್ಥಳವೆಂದರೆ ಚಿಕ್ಕಮಗಳೂರು. ಕರ್ನಾಟಕದ ಅತಿ ಎತ್ತರದ ಶಿಖರವಾದ ಮುಳ್ಳಯ್ಯನ ಗಿರಿ ಚಿಕ್ಕಮಗಳೂರಿನಲ್ಲಿದೆ. ಅಯ್ಯನಕೆರೆ ಕರ್ನಾಟಕದ ಎರಡನೇ ದೊಡ್ಡ ಸರೋವರವಾಗಿದೆ (ದಾವಣಗೇರೆಯ ಶಾಂತಿ ಸಾಗರ ಮೊದಲನೆಯದು)

ಮಾಣಿಕ್ಯಧಾರಾ ಜಲಪಾತ, ಸಿರಿಮನೆ ಜಲಪಾತ, ಕಲ್ಹತ್ತಿ ಜಲಪಾತ, ಹೆಬ್ಬೆ ಜಲಪಾತ, ಕಾಫಿ ವಸ್ತು ಸಂಗ್ರಹಾಲಯ ಚಿಕ್ಕಮಗಳೂರು, ಮುಂತಾದವನ್ನು ವೀಕ್ಷಿಸಬಹುದು.

ಕರಾವಳಿ/ಮಲೆನಾಡಿನ ಅಡುಗೆಗಳ ರುಚಿ ಸವಿಯಬಹುದು.


CHIKKAMAGALURU DISTRICT
KARNATAKA
N
DAVANGERE DISTRICT
CHITRADURGA DISTRICT
SHIMOGA DISTRICT
TUMKUR DISTRICT
UDUPI DISTRICT
HASSAN DISTRICT
DAKSHINA KANNADA DISTRICT
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters
Hilly area

## 1. ಶಾರದಾಂಬಾ ದೇವಸ್ಥಾನ ಶೃಂಗೇರಿ

ತುಂಗಾತೀರದ ಗುರು ಪರಂಪರೆಯ ಭವ್ಯ ನಾಡು ಶೃಂಗೇರಿ. ಶೃಂಗೇರಿ ಎಂಬ ಹೆಸರು ಋಷ್ಯಶೃಂಗಗಿರಿ ಎಂಬ ಹೆಸರಿನಿಂದ ಬಂದಿದೆ. ಹಾವೊಂದು ಹೆಡೆ ಬಿಚ್ಚಿ ಮೊಟ್ಟೆಯಿಡುತ್ತಿದ್ದ ಕಪ್ಪೆಯೊಂದಕ್ಕೆ ರಕ್ಷಣೆ ನೀಡುತ್ತಿತ್ತಂತೆ. ಶತ್ರುಗಳು ಮಿತ್ರರಾಗಿ ಸಹಕಾರಕ್ಕೆ ನಿಂತ ಈ ಸ್ಥಳದಲ್ಲಿ ಅಭೂತಪೂರ್ವವಾದ ಶಕ್ತಿ ಇದೆ ಎಂಬುದನ್ನು ಮನಗಂಡ ಆಚಾರ್ಯರು ಈ ಪ್ರದೇಶವನ್ನು ಪವಿತ್ರ ಪುಣ್ಯ ಕ್ಷೇತ್ರ ಮಾಡಿದರೆಂದು ಹೇಳಲಾಗುತ್ತದೆ. ಶೃಂಗೇರಿ ಶಾರದಾಪೀಠವು 8 ನೇ ಶತಮಾನದಲ್ಲಿ ಅದ್ವೈತ ವೇದಾಂತದ ಪ್ರತಿಪಾದಕರಾದ ಶಂಕರಾಚಾರ್ಯರು ಸ್ಥಾಪಿಸಿದ ನಾಲ್ಕು ಪ್ರಮುಖ ಮಠಗಳಲ್ಲಿ ಮೊದಲನೆಯದು. ಆದಿ ಶಂಕರರು ಸ್ಥಾಪಿಸಿದ 4 ಪೀಠಗಳಗಳಲ್ಲಿ ಇದನ್ನು ದಕ್ಷಿಣಾಮ್ನಾಯ ಪೀಠವೆನ್ನುತಾರೆ. ಶೃಂಗೇರಿಯ ಮಠವು ಯಜುರ್ವೇದದ ಉಸ್ತುವಾರಿ ಹೊಂದಿದೆ.

ಅಮ್ಮನವರ ದೇವಾಲಯವು ವಿಶಾಲವಾಗಿದ್ದು ದೇವಾಲಯದ ಒಳಗಡೆ ಕರಿಶಿಲೆಯಲ್ಲಿ ನಿರ್ಮಿಸಿದ ಅಮ್ಮನವರ ಗರ್ಭಗುಡಿ ಅತೀ ಸುಂದರವಾಗಿದೆ. ದೇವಿಯ ಮೂಲಬಿಂಬವು ಪಂಚಲೋಹದ ವಿಗ್ರಹವಾಗಿದ್ದು ನಾಲ್ಕು ಕರದಲ್ಲಿ ಪುಸ್ತಕ, ಕುಂಭ, ಜಪಮಾಲೆ ಹಾಗೂ ಅಭಯಹಸ್ತಳಾಗಿ, ಪದ್ಮಾಸನ ಸ್ಥಿತಳಾಗಿ ಕುಳಿತ ಭಂಗಿಯಲ್ಲಿರುವ ದೇವಿಯ ಬಿಂಬವು ನೋಡಲು ಅತೀ ಸುಂದಾರಾತಿ ಸುಂದರವಾಗಿದೆ. ದೇವಿಗೆ ನವರಾತ್ರಿಯಲ್ಲಿ ನವವಿಧವಾದ ಅಲಂಕಾರವನ್ನು ಮಾಡಲಾಗುತ್ತದೆ. ಶ್ರೀ ಶಾರದಾಂಬೆಯ ಚಿನ್ನದ ವೀಣೆಯು ಅತ್ಯಂತ ಸೂಕ್ಷ್ಮ ಕೆತ್ತನೆಯನ್ನು ಹೊಂದಿದ್ದು ಚಿನ್ನದ ವೀಣೆಯನ್ನು ಪಿಡಿದ ಅಮ್ಮನವರನ್ನು ಕಾಣುವುದೇ ಏಳೆಳು ಜನ್ಮದ ಪುಣ್ಯವೆಂಬಂತೆ ಅನಿಸುತ್ತದೆ.

ಶ್ರೀ ಕ್ಷೇತ್ರದಲ್ಲಿ ಶ್ರೀ ವಿದ್ಯಾಶಂಕರ ಮತ್ತು ಶ್ರೀ ಶಾರದಾಂಬೆ ಗುಡಿಗಳೊಂದಿಗೆ ಹಲವಾರು ದೇವರುಗಳ ಸಾನ್ನಿಧ್ಯವಿದೆ. ಶಕ್ತಿಗಣಪತಿ, ತೋರಣಗಣಪತಿ, ಕಾಲಭೈರವ, ಹರಿಹರೇಶ್ವರ, ಆಂಜನೇಯ, ದುರ್ಗಾಂಬಾ, ಕಾಳಿಕಾಂಬಾ, ರತ್ನಗರ್ಭಗಣಪತಿ, ಆದಿಶಂಕರಾಚಾರ್ಯರು ಇನ್ನೂ ಹಲವಾರು ಗುಡಿಗಳಿವೆ.

ಇಲ್ಲಿನ ಇನ್ನೊಂದು ಆಕರ್ಷಣೆ ಎಂದರೆ ಇಲ್ಲಿನ ಝುಳು-ಝುಳು ಹರಿಯುವ ತುಂಗೆಯ ಒಡಲಲ್ಲಿ ದೊಡ್ಡ-ದೊಡ್ಡ ಕಪ್ಪು ಬಣ್ಣದ ಸುಂದರ ಮೀನುಗಳು. ಇವುಗಳನ್ನು ಕಾಣುವುದೇ ಒಂದು ಆನಂದ. ಇವುಗಳಿಗೆ ಇಲ್ಲಿ ಯಾತ್ರಿಕರು ಮುಂಡಕ್ಕಿಯನ್ನು ಹಾಕುವ ಪರಿಪಾಠವನ್ನು ನಾವು ಕಾಣುತ್ತೇವೆ. ಹೀಗೆ ಅಮ್ಮನವರ ದೇವಾಲಯದಿಂದ ತುಂಗೆಯ ಒಂದು ತೀರದಿಂದ

ಇನ್ನೊಂದು ತೀರಕ್ಕೆ ಒಂದು ಸೇತುವೆ ಇದ್ದು, ಇಲ್ಲಿಂದ ನಾವು ಗುರುಗಳ ಮಠಕ್ಕೆ ತೆರಳಬಹುದು. ಇಲ್ಲಿ ಗೋಶಾಲೆ, ಗುರುಮಠ, ವೇದಶಾಲೆ ಮುಂತಾದವುಗಳನ್ನು ನಾವು ಕಾಣಬಹುದು.

ದೇವಾಲಯದಲ್ಲಿ ನಾವು ನಿತ್ಯ ಪೂಜೆಯೊಂದಿಗೆ ಅನ್ನಪ್ರಸಾದವನ್ನು ಉಂಡು ತೃಪ್ತರಾಗಲು ಅನ್ನಪ್ರಸಾದ ವ್ಯವಸ್ಥೆ ಕೂಡಾ ಇದೆ. ಅಲ್ಲದೆ ಇಲ್ಲಿ ಯಾತ್ರಿ ನಿವಾಸ ಕೂಡಾ ಇದ್ದು, ಬರುವ ಭಕ್ತಾಧಿಗಳಿಗೆ ಎಲ್ಲಾ ರೀತಿಯ ವ್ಯವಸ್ಥೆ ಕೂಡಾ ಇದೆ. ಇಲ್ಲಿ ಮಕ್ಕಳಿಗೆ ವಿದ್ಯಾಸರಸ್ವತೀ ಪೂಜೆ ಮಾಡಿಸಿದರೆ ಮಕ್ಕಳು ವಿದ್ಯಾವಂತಿಕೆಯೊಂದಿಗೆ, ಬುದ್ಧಿವಂತರಾಗುತ್ತಾರೆ ಎಂಬುದು ನಂಬಿಕೆ.

ದರ್ಶನ - ಬೆಳಿಗ್ಗೆ 6:00 AM - 2:00 PM ಮತ್ತು ಸಂಜೆ 4:00 PM - 9:00 PM
ಗುರು ದರ್ಶನ - ಬೆಳಿಗ್ಗೆ 10:30 AM - 11:30 AM ಮತ್ತು ಸಂಜೆ 5:00 PM - 5:30 PM
ಅನ್ನದಾನ - ಮಧ್ಯಾಹ್ನ 12:00 - 2:00 PM ಸಂಜೆ 7:30 PM - 8:30 PM

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಶೃಂಗೇರಿ ಪುರವರಾಧೀಶ್ವರೀ ಶ್ರೀ ಶಾರದಾಂಬಾ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಯಾ ಕುಂದೇಂದು-ತುಷಾರ-ಹಾರಧವಲಾ ಯಾ ಶುಭ್ರ-
ವಸ್ತ್ರಾನ್ವಿತಾ | ಯಾ ವೀಣಾವರದಂಡ-ಮಂಡಿತಕರಾ ಯಾ ಶ್ವೇತಪದ್ಮಾಸನಾ ||

ಯಾ ಬ್ರಹ್ಮಾಚ್ಯುತ-ಶಂಕರಪ್ರಭೃತಿಭಿ-ರ್ದೇವೈಸ್ಸದಾ ಪೂಜಿತಾ |
ಸಾ ಮಾಂ ಪಾತು ಸರಸ್ವತೀ ಭಗವತೀ ನಿಃಶೇಷಜಾಡ್ಯಾಪಹಾ ||

ಹತ್ತಿರದ ಆಕರ್ಷಣೆಗಳು - ಕಲಶೇಶ್ವರ ಸ್ವಾಮಿ ದೇವಾಲಯ, ಕಳಸ, ಮೂಡಿಗೆರೆ ತಾಲ್ಲೂಕು, ಋಷ್ಯಶೃಂಗೇಶ್ವರ ಸ್ವಾಮಿ ದೇವಾಲಯ, ಕಿಗ್ಗಾ, ಶೃಂಗೇರಿ ತಾಲ್ಲೂಕು, ಗುರುದತ್ತಾತ್ರೇಯ ಪೀಠ, ಚಿಕ್ಕಮಗಳೂರು, ಅನ್ನಪೂರ್ಣೇಶ್ವರಿ ದೇವಾಲಯ ಹೊರನಾಡು (54 ಕಿಮಿ), ಆಗುಂಬೆಯ (30 ಕಿ.ಮೀ) ಜಗತ್ಪ್ರಸಿದ್ಧ ಸೂರ್ಯಾಸ್ತಮಾನ ವೀಕ್ಷಣೆ, ಸಿರಿಮನೆ ಜಲಪಾತ (12 ಕಿ.ಮೀ), ಕುಂದಾದ್ರಿ (28 ಕಿ.ಮೀ), ಕವಿಶೈಲ (40 ಕಿ.ಮೀ) ಶೃಂಗೇರಿಯೊಂದಿಗೆ ಭೇಟಿ ನೀಡಬಹುದಾದ ಇತರ ಆಸಕ್ತಿಯ ಸ್ಥಳಗಳಾಗಿವೆ.

## 2. ಅನ್ನಪೂರ್ಣೇಶ್ವರಿ ದೇವಸ್ಥಾನ ಹೊರನಾಡು

ಹೊರನಾಡು ಮಲ್ನಾಡದ ಮಧ್ಯೆ ಮಂಗಳೂರಿನಿಂದ 126 ಕಿ.ಮೀ ದೂರದಲ್ಲಿದೆ ಮತ್ತು ಬೆಂಗಳೂರಿನಿಂದ 316 ಕಿಮೀ ದೂರದಲ್ಲಿದೆ. ಶೃಂಗೇರಿಯಿಂದ 75 ಕಿಮೀ ದೂರವಿದೆ. ಬೆಂಗಳೂರಿನಿಂದ ಹೊರನಾಡು ನೇರ ಬಸ್ಸುಗಳು ಪ್ರತಿದಿನವೂ ಚಲಿಸುತ್ತವೆ.

ಹೊರನಾಡು ಕ್ಷೇತ್ರವನ್ನು ಅಗಸ್ತ್ಯ ಮಹರ್ಷಿಗಳು ಸ್ಥಾಪಿಸಿದರು ಎಂಬ ಐತಿಹ್ಯವಿದೆ. ಅನ್ನಪೂರ್ಣೇಶ್ವರಿ ತಾಯಿಯ ಕೃಪೆಗೆ ಪಾತ್ರರಾದವರಿಗೆ ಜೀವನದ ಉದ್ದಕ್ಕೂ ಅನ್ನ ಸಿಗುತ್ತದೆ ಎಂಬ ನಂಬಿಕೆ ಅನೇಕರಲ್ಲಿದೆ.

ಮುಖ್ಯ ದೇವತೆ, ಅನ್ನಪೂರ್ಣೇಶ್ವರಿಯನ್ನು ಚಿನ್ನದಿಂದ ತಯಾರಿಸಲಾಗಿದೆ. ಇತರ ದೇವತೆಗಳೆಂದರೆ ಶ್ರೀ ಉದ್ಭವ ಮಹಾಗಣಪತಿ, ಶ್ರೀ ಅಂಜನೇಯ ಸ್ವಾಮಿ, ಶ್ರೀ ನವಗ್ರಹ.

'ಚಂಡಿಕಾ ಹೋಮ' ಈ ಕ್ಷೇತ್ರದ ವಿಶೇಷ. ದೇವಸ್ಥಾನಕ್ಕೆ ಬರುವ ಭಕ್ತರಿಗೆ ಬೆಳಿಗ್ಗೆ ಉಪಹಾರ ಮತ್ತು ಕಾಫಿ , ಹನ್ನೊಂದು ಗಂಟೆ ವೇಳೆಗೆ ಪಾನಕ ಹಾಗೂ ಮಹಾಮಂಗಳಾರತಿ ನಂತರ ಮಧ್ಯಾಹ್ನ ಹಾಗೂ ರಾತ್ರಿ ಕೆಂಪಕ್ಕಿ ಅನ್ನದ ಪುಳಿಯೋಗರೆ, ಪಾಯಸ ಸಹಿತ ಪುಷ್ಕಳ ಭೋಜನವನ್ನು ನೀಡುವ ಸಂಪ್ರದಾಯವಿದೆ. ಭಕ್ತರಿಗಾಗಿ 200 ಸುಸಜ್ಜಿತ ಕೊಠಡಿಗಳ ಅತಿಥಿ ಗೃಹವಿದೆ.

ದರ್ಶನ ಸಮಯ - ಬೆಳಿಗ್ಗೆ 6:00 AM - 2:00 PM ಮತ್ತು ಸಂಜೆ 4:00 PM - 9:00 PM

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಹೊರನಾಡು ಪುರವರಾಧೀಶ್ವರೀ ಶ್ರೀ ಅನ್ನಪೂರ್ಣೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ |
ಜ್ಞಾನವೈರಾಗ್ಯಸಿದ್ಧ್ಯರ್ಥಂ ಭಿಕ್ಷಾಂ ದೇಹಿ ಚ ಪಾರ್ವತಿ || 1 ||

ಮಾತಾ ಮೇ ಪಾರ್ವತೀ ದೇವೀ ಪಿತಾ ದೇವೋ ಮಹೇಶ್ವರಃ |
ಬಾನ್ಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಮ್ || 2 ||

ಉತ್ಸವಗಳು - ಅಕ್ಷಯ ತೃತೀಯಾ ಉತ್ಸವಗಳು, ವಾರ್ಷಿಕ ಜಾತ್ರೆ

## 3. ಚಿಕ್ಕಮಗಳೂರು ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಗುರುದತ್ತಾತ್ರೇಯ ಪೀಠ, ಬಾಬಾಬುಡನ್ ಗಿರಿ ಚಿಕ್ಕಮಗಳೂರು ತಾಲ್ಲೂಕು
2. ಶ್ರೀ ಸಿದ್ದೇಶ್ವರ ಸ್ವಾಮಿ ದೇವಾಲಯ, ಬಿಸಗ್ನಿ ಮಠ, ಚಿಕ್ಕಮಗಳೂರು ತಾಲ್ಲೂಕು
3. ಶ್ರೀ ಮಾರ್ಕಂಡೇಯ ದೇವಾಲಯ ಖಂಡ್ಯ, ಚಿಕ್ಕಮಗಳೂರು ತಾಲ್ಲೂಕು
4. ಶ್ರೀ ವೀರ ನಾರಾಯಣ ದೇವಸ್ಥಾನ, ಬೆಳವಾಡಿ, ಚಿಕ್ಕಮಗಳೂರು ತಾಲ್ಲೂಕು
5. ಶ್ರೀ ಕೊದಂಡರಾಮ ದೇವಾಲಯ, ಹಿರೇಮಗಳೂರು, ಚಿಕ್ಕಮಗಳೂರು ತಾಲ್ಲೂಕು
6. ಶ್ರೀ ಯೋಗ ನರಸಿಂಹ ದೇವಸ್ಥಾನ, ಬಗ್ಗವಳ್ಳಿ, ಚಿಕ್ಕಮಗಳೂರು ತಾಲ್ಲೂಕು
7. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ಹಿರೇನಲ್ಲೂರು, ಕಡೂರು ತಾಲ್ಲೂಕು
8. ಶ್ರೀ ಜೇನುಕಲ್ಲು ಅಣ್ಣಪ್ಪ ಸ್ವಾಮಿ ದೇವಾಲಯ, ಅತ್ತಿಗೆರೆ, ಮೂಡಿಗೆರೆ ತಾಲ್ಲೂಕು
9. ಶ್ರೀ ಕಲಶೇಶ್ವರ ಸ್ವಾಮಿ ದೇವಾಲಯ, ಕಳಸ, ಮೂಡಿಗೆರೆ ತಾಲ್ಲೂಕು
10. ಶ್ರೀ ಶಾಂತಿನಾಥ ನೇಮಿನಾಥ ಬಸದಿ, ಅಂಗಡಿ, ಮೂಡಿಗೆರೆ ತಾಲ್ಲೂಕು
11. ಶ್ರೀ ಋಷ್ಯಶೃಂಗೇಶ್ವರ ಸ್ವಾಮಿ ದೇವಾಲಯ, ಕಿಗ್ಗಾ, ಶೃಂಗೇರಿ ತಾಲ್ಲೂಕು
12. ಆದಿ ಶಂಕರಾಚಾರ್ಯ ಶಾರದಾ ಲಕ್ಷ್ಮಿನರಸಿಂಹ ಪೀಠ. ಹರಿಹರಪುರ, ಕೊಪ್ಪ
13. ಜಗದ್ಗುರು ರಂಭಾಪುರಿ ಮಠ, ಬಾಳೆಹೊನ್ನೂರು, ನರಸಿಂಹರಾಜಪುರ ತಾಲ್ಲೂಕು
14. ಶ್ರೀ ಅಮೃತೇಶ್ವರ ದೇವಾಲಯ, ಅಮೃತಾಪುರ, ತರಿಕೇರೆ ತಾಲ್ಲೂಕು

## 4. ಚಿಕ್ಕಮಗಳೂರು ಜಿಲ್ಲೆಯ ಪ್ರಯಾಣ ಮಾರ್ಗ ಸೂಚಿಗಳು

1. ಕೇಂದ್ರ - ಚಿಕ್ಕಮಗಳೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಹಿರೇಮಗಳೂರು, ಬಾಬಾಬುಡನಗಿರಿ / ದತ್ತಾತ್ರೇಯಪೀಠ, ಮಾಣಿಕ್ಯಧಾರಾ ವಾಟರ್ ಫಾಲ್ಸ್, ರತ್ನಗಿರಿ ಬೋರೆ(ಮ.ಗಾಂ. ಪಾರ್ಕ್)

2. ಕೇಂದ್ರ - ಚಿಕ್ಕಮಗಳೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಬೆಳವಾಡಿ, ಹಿರೇಮಗಳೂರು, ಮೂಡಿಗೆರೆ ಹೋಟೆಲ್ನಲ್ಲಿ ಊಟ, ಅಂಗಡಿ, ಗೋಣಿಬೀಡು.
3. ಕೇಂದ್ರ - ಚಿಕ್ಕಮಗಳೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಕೆಮ್ಮಣಗುಂಡಿ, ಕಲ್ಲಹತಗಿರಿ ಜಲಪಾತಗಳು, ಅಮೃತಪುರ
4. ಕೇಂದ್ರ - ಚಿಕ್ಕಮಗಳೂರು, ಸಮಯ - ಎರಡು ದಿನಗಳು, ವೀಕ್ಷಣೆ - ಕಳಸ, ಹೊರನಾಡು (ಮಧ್ಯಾಹ್ನ ಊಟ), ಕುದ್ರೆಮುಖ, ಶೃಂಗೇರಿ (ರಾತ್ರಿ ಶೃಂಗೇರಿ ಮಠದಲ್ಲಿ ತಂಗಿರಿ), ಕಿಗ್ಗ, ಹರಿಹರಪುರ, ರಂಬಾಪುರಿ ಪೀಠ (ಮಧ್ಯಾಹ್ನ ಊಟ), ಖಾಂಡ್ಯ, ಕುದ್ರೆಹಬ್ಬಿ, ಚಿಕ್ಕಮಗಳೂರು

# 5. ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ದಕ್ಷಿಣಕನ್ನಡ ಒಂದು ಕರಾವಳಿ ಜಿಲ್ಲೆ. ಈ ಜಿಲ್ಲೆಯನ್ನು ಉಡುಪಿ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳು ಹಾಗೂ ಕೇರಳ ಮತ್ತು ಅರಬ್ಬಿ ಸಮುದ್ರ ಸುತ್ತುವರಿದಿವೆ. ಮಂಗಳೂರು ಪಟ್ಟಣವು ಜಿಲ್ಲಾ ಕೇಂದ್ರ. ಬಂಟ್ವಾಳ, ಬೆಳ್ತಂಗಡಿ, ಮಂಗಳೂರು, ಪುತ್ತೂರು, ಸುಳ್ಯ ಎಂಬ 5 ತಾಲ್ಲೂಕುಗಳನ್ನು ಹೊಂದಿದೆ.

ಯಕ್ಷಗಾನ, ಕಂಬಳ, ಭೂತಾರಾಧನೆ, ನಾಗಾರಾಧನೆ ಈ ಪ್ರದೇಶದ ಅವಿಭಾಜ್ಯ ಅಂಗವಾಗಿದೆ. ಇಲ್ಲಿನ ಪ್ರಮುಖ ಭಾಷೆಗಳು ತುಳು, ಕೊಂಕಣಿ, ಕನ್ನಡ. ದಕ್ಷಿಣಕನ್ನಡ ಕೆಂಪು ಹಂಚುಗಳ ತಯಾರಿಕೆಗೆ, ಹಣಕಾಸು, ಶಿಕ್ಷಣ, ವೈದ್ಯಕೀಯ ಸಂಸ್ಥೆಗಳಿಗೆ, ಗೋಡಂಬಿ ಮತ್ತು ಅದರ ಉತ್ಪನ್ನಗಳು, ಹಾಗೂ ವಿವಿಧ ಮೀನು ಅಡುಗೆ ಶೈಲಿಗಳಿಗೆ ಹೆಸರುವಾಸಿಯಾಗಿದೆ. ಗೊಳಿಬಜ್ಜಿ, ಗಡಬಡ ಐಸ್ ಕ್ರೀಮ್, ಬನ್ಸ್ ಬಾಜಿ, ಗೋಳಿಬಜೆ, ನೀರ್ ದೋಸೆ, ಕೋರಿರೊಟ್ಟಿ, ಪತ್ರೊಡೆ, ರಾಗಿ ಮಣ್ಣಿ ಮುಂತಾದವನ್ನು ಮರೆಯದೆ ಸವಿಯಿರಿ.

ನೇತ್ರಾವತಿ, ಕುಮಾರಧಾರ, ಫಲ್ಗುಣಿ, ನಂದಿನಿ, ಶಾಂಭವಿ, ಪಂಗಲಾ ಇವು ದಕ್ಷಿಣಕನ್ನಡ ಜಿಲ್ಲೆಯ ನದಿಗಳು.

ಸಾರಿಗೆ ವ್ಯವಸ್ಥೆ - ಈ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿಗಳಾದ 66, 73, 75, 169, 275, ಮತ್ತು ದಕ್ಷಿಣ ರೈಲ್ವೇ, ಕೊಂಕಣ ರೈಲ್ವೇ ಹಳಿಗಳು ಉತ್ತಮ ಸಾರಿಗೆ ಕಲ್ಪಿಸಿವೆ. ಮಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣವನ್ನು ಹೊಂದಿದೆ. ಖಾಸಗಿ ಮತ್ತು ಸರಕಾರಿ ಬಸ್ ಸೌಲಭ್ಯ ರಾಜ್ಯದಲ್ಲಿಯೇ ಅತ್ಯುತ್ತಮ.

1. ಅಲಾಯ್ಸಿಯಮ್ ಪುರಾತತ್ವ ವಸ್ತು ಸಂಗ್ರಹಾಲಯ ಮಂಗಳೂರು
2. ಶ್ರೀಮಂತಿ ಬಾಯಿ ಸ್ಮಾರಕ ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಬಿಜೈ ಮಂಗಳೂರು
3. ಮಂಜುಷಾ ಪ್ರಾಚೀನ ವಸ್ತುಗಳು ಮತ್ತು ವಾಹನಗಳ ಸಂಗ್ರಹಾಲಯ, ಧರ್ಮಸ್ಥಳ

ಪುತ್ತೂರು ಬೇಂದ್ರೆ ತೀರ್ಥ ಬಿಸಿನೀರಿನ ಬುಗ್ಗೆ, ಪಿಲಿಕುಲಾ ನಿಸರ್ಗಧಾಮ ಮಂಗಳೂರು, ಪಣಂಬೂರು ಕಡಲತೀರ, ಸೋಮೇಶ್ವರ ಕಡಲತೀರ, ತಣ್ಣೀರ್ ಬಾವಿ ಕಡಲತೀರ, ಉಳ್ಳಾಲ್ ಕಡಲತೀರ, ಸೂರತ್‌ಕಲ್ ಕಡಲತೀರ ಮುಂತಾದವನ್ನು ವೀಕ್ಷಿಸಬಹುದು.

# DAKSHINA KANNADA DISTRICT
## KARNATAKA










**LEGEND**

- Metalled road
- National Highway
- Railway track
- Taluk boundary
- District headquarters
- Taluk headquarters
- Hilly area

## 1. ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನ

ಮಂಗಳೂರಿನಿಂದ 104 ಕಿ.ಮೀ. ದೂರದಲ್ಲಿ, ಸುಳ್ಯ ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಕುಮಾರಪರ್ವತ ಬೆಟ್ಟಗಳ ನಡುವೆ ಕುಮಾರಧಾರಾ ನದಿಯ ದಡದಲ್ಲಿರುವ ಶ್ರೀ ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನವು ಸುಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಸರ್ಪಗಳ ರಾಜ ವಾಸುಕಿ ಮತ್ತು ಇತರ ಸರ್ಪಗಳು ಹೇಗೆ ಇಲ್ಲಿಯ ಗುಹೆಗಳಲ್ಲಿ ಸುಬ್ರಹ್ಮಣ್ಯ ದೇವರ ಅಡಿಯಲ್ಲಿ ಆಶ್ರಯ ಪಡೆದುಕೊಂಡವು ಎಂಬುದನ್ನು ಪುರಾಣಗಳಲ್ಲಿ ಹೇಳಲಾಗಿದೆ. ಇಲ್ಲಿ ಸುಬ್ರಹ್ಮಣ್ಯ ದೇವರನ್ನು ದೈವಿಕ ಶಕ್ತಿಯಿರುವ ಸರ್ಪ ರೂಪವೆಂದು ಪೂಜಿಸಲಾಗುತ್ತದೆ. ಇಲ್ಲಿ ನಾಗಮಂಡಲ ಎಂಬ ಧಾರ್ಮಿಕ ನೃತ್ಯವನ್ನು ಆರಾಧನೆಯ ಸಮಯದಲ್ಲಿ ನಡೆಸಲಾಗುತ್ತದೆ. ಈ ಕ್ಷೇತ್ರವು ಸರ್ಪ ದೋಷ ನಿವಾರಣೆಗೆ ಪ್ರಸಿದ್ಧವಾಗಿದ್ದು ಸರ್ಪ ಸಂಸ್ಕಾರ, ನಾಗಪ್ರತಿಷ್ಠೆ, ಆಶ್ಲೇಶಬಲಿ ಪೂಜೆ ಇಲ್ಲಿಯ ವಿಶೇಷವಾಗಿದೆ. ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ. ಕುಕ್ಕೆಯ ಇನ್ನೊಂದು ಚರಿತ್ರೆಯೆಂದರೆ ಮಲೆಕುಡಿಯ ಎಂಬ ಜನಾಂಗದವರು ಹಾವುಗಳನ್ನು ಕುಮಾರಗಿರಿಯ ಕಾಡ್ಗಿಚ್ಚಿನಿಂದ ಕಾಪಾಡಿ ಅವುಗಳನ್ನು ಕುಕ್ಕೆ (ಬುಟ್ಟಿ)ಗಳಲ್ಲಿ ತಂದು ಒಂದು ಊರಿನಲ್ಲಿ ಬಿಟ್ಟರು ಅದೇ ಕುಕ್ಕೆ ಲಿಂಗ. ಆದ್ದರಿಂದ ಈ ಜನಾಂಗದವರನ್ನು ದೇವಸ್ಥಾನದ ಉತ್ಸವ ಮತ್ತು ಹಬ್ಬಗಳಿಗೆ ಆಹ್ವಾನಿಸುತ್ತಾರೆ.

ಗರ್ಭಗುಡಿಯ ಮಧ್ಯಭಾಗದಲ್ಲಿ ಶ್ರೀ ದೇವರ ಮೂರ್ತಿಯಿದೆ. ಅದರ ಮೇಲಿನ ಹಂತದಲ್ಲಿ ಶ್ರೀ ಸುಬ್ರಹ್ಮಣ್ಯ ಮೂರ್ತಿ ಮತ್ತು ವಾಸುಕಿ ಹಾಗೂ ಕೆಳ ಹಂತದಲ್ಲಿ ಆದಿಶೇಷನ ಮೂರ್ತಿಗಳಿವೆ. ಭಕ್ತಾದಿಗಳು ಒಳ ಸುತ್ತನ್ನು ಪ್ರವೇಶಿಸುವಾಗ ತಮ್ಮ ಅಂಗಿ ಮತ್ತು ಒಳ ಅಂಗೀಗಳನ್ನು ತೆಗೆಯಬೇಕಾಗುವುದು.

ದರ್ಶನ ಸಮಯ - ಬೆಳಿಗ್ಗೆ 6.00 am ರಿಂದ ಸಂಜೆ 8.00 pm

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕುಕ್ಕೆ ಪುರವಾರಾಧೀಶ್ವರ ಶ್ರೀ ವಲ್ಲಿ ದೇವಸೇನಾ ಸಮೇತ ಶ್ರೀ ಸುಬ್ರಹ್ಮಣ್ಯ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ -
ಷಡಾನನಂ ಚಂದನ ಲೇಪಿತಾಂಗಂ ಮಹೋರಸಂ ದಿವ್ಯ ಮಯೂರ ವಾಹನಂ |
ರುದ್ರಸ್ಯ ಸೂನಂ ಸುರಲೋಕ ನಾದಂ ಸುಬ್ರಹ್ಮಣ್ಯ ದೇವಂ ಶರಣಂ ಪ್ರಪದ್ಯೇ ||

ವಿಶೇಷ ಉತ್ಸವಗಳು - ನಾಗರ ಪಂಚಮಿ, ಪ್ರತಿಮಾಸದ ಶುದ್ಧ ಷಷ್ಠೀ, ಮಹಾರಾಥೋತ್ಸವ (ಚಂಪ ಷಷ್ಠೀ ಬ್ರಹ್ಮರಥೋತ್ಸವ), ಚಂದ್ರ ಮಂಡಲ ಉತ್ಸವ.

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

ಭಕ್ತಾದಿಗಳ ಸೌಲಭ್ಯಗಳು - ವಸತಿ ಸೌಲಭ್ಯ, ವಾಹನ ನಿಲುಗಡೆ, ಸಿಸಿಟಿವಿ ಭದ್ರತಾ ವ್ಯವಸ್ಥೆ, ಅನ್ನಪ್ರಸಾದ, ಸಾರ್ವಜನಿಕ ಶೌಚಾಲಯ, ಸ್ನಾನ ಘಟ್ಟಾದಲ್ಲಿ ಉಡುಗೆ ಬದಲಾವಣೆ ಕೊಠಡಿಗಳು, ಶುದ್ಧೀಕರಿಸಿದ ಕುಡಿಯುವ ನೀರು, ಆದಿಸುಬ್ರಹ್ಮಣ್ಯ ಮತ್ತು ಬಿಲಾದಾರದಲ್ಲಿ ಉದ್ಯಾನವನ, ಕಲ್ಯಾಣ ಮಂಟಪ ಮತ್ತು ಸಭಾಭವನ, ಗ್ರಂಥಾಲಯ.

ಕುಕ್ಕೆಯ ಆಕರ್ಷಣೆಗಳು - ಬಲ್ಲಾಳರಾಯ ವಿಗ್ರಹ, ದರ್ಪಣ ತೀರ್ಥ, ಕುಕ್ಕೇ ಲಿಂಗ, ಉತ್ತರಾದಿ ಮಠ, ಶ್ರೀ ಸುಬ್ರಹ್ಮಣ್ಯ ಮಠ, ಹರಿ ಹರೇಶ್ವರ ದೇವಸ್ಥಾನ, ಕಾಲ ಬೈರವ, ಆದಿ ಸುಬ್ರಹ್ಮಣ್ಯ, ಸಂಪುಟ ನರಸಿಂಹ, ಆದಿ ಸುಬ್ರಹ್ಮಣ್ಯ ದೇವಸ್ಥಾನದ ಹತ್ತಿರ ಉದ್ಯಾನ, ಉಮಾಮಹೇಶ್ವರ, ಕಾಶಿಕಟ್ಟೆ ಗಣಪತಿ, ವನದುರ್ಗ ದೇವಿ ದೇವಾಲಯ, ದೇವಾಲಯದ ಉದ್ಯಾನ, ಕುಕ್ಕೇ ಶ್ರೀ ಅಭಯ ಮಹಾಗಣಪತಿ, ಶೃಂಗೇರಿ ಮಠ,

ಕುಕ್ಕೆ ಹತ್ತಿರದ ಆಕರ್ಷಣೆಗಳು - ಸುಬ್ರಹ್ಮಣ್ಯ ಬಳಿಯ ಕುಮಾರ ಪರ್ವತವು ಜನಪ್ರಿಯ ಚಾರಣ ತಾಣವಾಗಿದೆ. ಕುಕ್ಕೆ ಸುಬ್ರಹ್ಮಣ್ಯ ದೊಂದಿಗೆ ಧರ್ಮಸ್ಥಳ (55 ಕಿ.ಮೀ), ಮಡಿಕೇರಿ (75 ಕಿ.ಮೀ), ಬಿಸಿಲೆ ಘಾಟ್ (20 ಕಿ.ಮೀ) ಭೇಟಿ ನೀಡಬೇಕಾದ ಕೆಲವು ಆಕರ್ಷಣೆಗಳಾಗಿವೆ.

## 2. ಧರ್ಮಸ್ಥಳ ಮಂಜುನಾಥ ದೇವಸ್ಥಾನ

ಈ ಪ್ರಸಿದ್ಧ ದೇವಸ್ಥಾನವು ಮಂಗಳೂರಿನ ಪೂರ್ವಕ್ಕೆ ಸುಮಾರು 75 ಕಿ.ಮೀ. ದೂರದಲ್ಲಿ ಬೆಳ್ತಂಗಡಿ ತಾಲೂಕಿನ ಪಶ್ಚಿಮ ಘಟ್ಟಗಳ ಇಳಿಜಾರಿನ ಕಾಡಿನ ಮಧ್ಯದಲ್ಲಿ ನೇತ್ರಾವತಿ ನದಿಯ ದಂಡೆಯಲ್ಲಿ ಸ್ಥಾಪಿತವಾಗಿದೆ. ಕೇರಳ ವಾಸ್ತುರೀತಿಯಲ್ಲಿ ದೇವಸ್ಥಾನವನ್ನು ಕಟ್ಟಲಾಗಿದೆ. ಮಂಜುನಾಥ ದೇವಾಲಯವು ಶೈವರ ಆರಾಧ್ಯ ಕೇಂದ್ರವಾಗಿದ್ದು, ಇದು ಮಧ್ವ ವೈಷ್ಣವ ಪಂಥದ ಪುರೋಹಿತರನ್ನು ಹೊಂದಿದೆ ಮತ್ತು ಈ ದೇವಸ್ಥಾನದ ಉಸ್ತುವಾರಿಯನ್ನು ಜೈನ ಪಂಥಕ್ಕೆ ಸೇರಿದ ಹೆಗ್ಗಡೆ ಕುಟುಂಬದವರು ವಂಶ ಪಾರಂಪರ್ಯವಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ. ದೇವಾಲಯದ ಬಳಿ ಬೆಟ್ಟದ ಮೇಲೆ 39 ಅಡಿ ಎತ್ತರದ ಬಾಹುಬಲಿಯ ಮೂರ್ತಿಯನ್ನು 1980 ರಲ್ಲಿ ಸ್ಥಾಪಿಸಲಾಗಿದೆ. ದೇವಾಲಯದ ಎದುರು ಮಂಜುಷ ಎಂಬ ವಸ್ತು ಸಂಗ್ರಹಾಲಯವಿದೆ. ಇಲ್ಲಿ ನಾವು ಪ್ರಾಚೀನ ವಸ್ತುಗಳು, ವರ್ಣಚಿತ್ರಗಳು, ತಾಳೆಗರಿ ಮೇಲಿರುವ ಪ್ರಾಚೀನ ಲಿಪಿಗಳು, ದೇವಾಲಯದ ರಥಗಳು ಇತ್ಯಾದಿ ಸಂಗ್ರಹಗಳನ್ನು ಕಾಣಬಹುದು. ಶ್ರೀ ಕ್ಷೇತ್ರವು ದಾನ ಮತ್ತು ಧಾರ್ಮಕ್ಕೆ ಪ್ರಸಿದ್ಧಿಯಾಗಿದ್ದು, ಇಲ್ಲಿ ನಿತ್ಯವೂ ಅನ್ನದಾಸೋಹ ನಡೆಯುತ್ತದೆ. ಲಕ್ಷ ದೀಪೋತ್ಸವ ವಾರ್ಷಿಕ ಉತ್ಸವದ ಸಂದರ್ಭದಲ್ಲಿ, ಒಂದು ಲಕ್ಷ ದೀಪಗಳು ಬೆಳಗಿಸುವುದು ಇಲ್ಲಿನ ವೈಶಿಷ್ಟ್ಯ. ಈ ಸಂದರ್ಭದಲ್ಲಿ ಸಾಹಿತ್ಯ ಹಾಗು ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲಾಗುತ್ತದೆ.

ಪರಿವಾರ ದೇವತೆಗಳು - ಶ್ರೀ ಅಮ್ಮನವರು, ಶ್ರೀ ಗಣಪತಿ ಸ್ವಾಮಿ, ಶ್ರೀ ಅಣ್ಣಪ್ಪಾ ಸ್ವಾಮಿ

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಧರ್ಮಸ್ಥಳ ಪುರವರಾಧೀಶ್ವರ ಶ್ರೀ ಪಾರ್ವತಿ ದೇವೀ ಸಮೇತ ಶ್ರೀ ಮಂಜುನಾಥೆಶ್ವರ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಮಂದಾಕಿನೀ ಸಲಿಲ ಚಂದನ ಚರ್ಚಿತಾಯ |
ನಂದೀಶ್ವರ ಪ್ರಮಥನಾಥ ಮಹೇಶ್ವರಾಯ || ಮಂದಾರ ಪುಷ್ಪ ಬಹುಪುಷ್ಪ
ಸುಪೂಜಿತಾಯ | ತಸ್ಮೈ "ಮ" ಕಾರಾಯ ನಮಃ ಶಿವಾಯ ||

ದರ್ಶನ ಸಮಯ - ಬೆಳಿಗ್ಗೆ 6:30 ರಿಂದ 11:00 ಘಂಟೆ, ಮಧ್ಯಾಹ್ನ 12:15 pm to 2:30 pm, ಸಂಜೆ 5 pm to 8:30 pm. ಅಬಿಷೇಕ ಅರ್ಚನೆ ಸಮಯ - 8-30 a.m. to 10-30 a.m. ತುಲಾಭಾರ ಸೇವಾ ಸಮಯ - 8:00 a.m. and 01:00 Noon, ಮೂಡಿ ಸೇವೆ ಬೆಳಿಗ್ಗೆ 06 Am to 02 Pm ಸಂಜೆ 05 Pm to 07 Pm.

ಅನ್ನಪ್ರಸಾದ ಸಮಯ - 11 am to 3 pm ಮತ್ತು 07 Pm to 10 Pm

ಪ್ರಮುಖ ಸೇವೆಗಳು - ತುಲಾಭಾರ, ಶ್ರೀ ಮುಡಿ ಸೇವೆ, ನೇತ್ರಾವತಿ ಪುಣ್ಯ ಸ್ನಾನ, ಪ್ರಸಾದಸೇವೆ. ಶತ ರುದ್ರಾಭಿಷೇಕ,

ಉತ್ಸವಗಳು - ವಾರ್ಷಿಕ ಜಾತ್ರೆ, ಶಿವರಾತ್ರಿ ಉತ್ಸವ, ಲಕ್ಷ ದೀಪೋತ್ಸವ, ನವರಾತ್ರಿ ಉತ್ಸವ

ಸ್ಥಳೀಯ ಇತರ ಆಕರ್ಷಣೆ - ಶ್ರೀ ಚಂದ್ರನಾಥ ಸ್ವಾಮಿ ಬಸದಿ, ಶ್ರೀ ಅಣ್ಣಪ್ಪಾ ಸ್ವಾಮಿ ಬೆಟ್ಟ, ಶ್ರೀ ಬಾಹುಬಲಿ ಬೆಟ್ಟ, ಎಸ್.ಡಿ.ಎಂ. ತಾಳೆಗರಿ ವಾಚನಾಲಯ, ಮಂಜುಷಾ ವಸ್ತು ಸಂಗ್ರಹಾಲಯ, ಹಳೆ ವಾಹನ ಸಂಗ್ರಹಾಲಯ, ನಾಡಾ ಗ್ರಾಮದ ಸೂರ್ಯ ಸದಾಶಿವ ದೇವಸ್ಥಾನವು ಉಜಿರೆ ಪಟ್ಟಣದಿಂದ 4 ಕಿ.ಮೀ ದೂರದಲ್ಲಿದೆ.

ಭಕ್ತಾದಿಗಳ ಸೌಲಭ್ಯಗಳು - ಆರೋಗ್ಯಕರ ಆಹಾರ, ಆರೋಗ್ಯಕರ ವಸತಿ, ವಾಹನ ನಿಲುಗಡೆ, ಮೂಲಭೂತ ಅವಶ್ಯಕತೆಗಳು ಕುಡಿಯುವ ನೀರು, ಶೌಚಾಲಯ, ಸ್ನಾನಗೃಹ, ಉಪಯುಕ್ತ ವಸ್ತುಗಳ ಪೂರೈಕೆ, ವೈದ್ಯಕೀಯ ಸೇವೆ, ರಕ್ಷಣೆ, ಕಾಣೆಯಾದವರ ಮತ್ತು ವಸ್ತುಗಳ ವಿಭಾಗ.

## 3. ಸೌತಡ್ಕಾ ಶ್ರೀ ಗಣಪತಿ ದೇವಸ್ಥಾನ

ಸೌತಡ್ಕ ಶ್ರೀ ಮಹಾಗಣಪತಿ ಕ್ಷೇತ್ರವು ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಧಾರ್ಮಿಕ ಕೇಂದ್ರವಾಗಿದ್ದು, ಬೆಳ್ತಂಗಡಿ ತಾಲೂಕಿನ ಕೊಕ್ಕಡದಿಂದ ಸುಮಾರು 3 ಕಿ.ಮೀ ದೂರದಲ್ಲಿರುವುದು. ಈ ಕ್ಷೇತ್ರದ ವಿಶೇಷತೆವೆಂದರೆ ಇಲ್ಲಿನ ಆರಾಧ್ಯ ದೇವರಾದ ಗಣಪನಿಗೆ ಗರ್ಭಗುಡಿ, ದೇವಸ್ಥಾನವಿಲ್ಲದೆ ಹಚ್ಚ ಹಸುರಿನ ವಿಶಾಲವಾದ ಮೈದಾವನವನ್ನೆ ತನ್ನ ಕ್ಷೇತ್ರವಾಗಿರಿಸಿದ್ದಾನೆ. ಈ ಕ್ಷೇತ್ರದಲ್ಲಿ ನಾವು ಮುಖ್ಯವಾಗಿ ಭಕ್ತರಿಂದ ಹರಕೆಯಾಗಿ ಬಂದಿರುವ ಗಂಟೆಗಳನ್ನು ಕಾಣಬಹುದು. ಈ ಕ್ಷೇತ್ರದಲ್ಲಿ ಭಕ್ತರಿಗೆ ಮಧ್ಯಾಹ್ನದ ಊಟವನ್ನು ಪ್ರಸಾದ ರೂಪದಲ್ಲಿ ನೀಡಲಾಗುವುದು.

ಪ್ರತಿ ದಿನ 1 ತೆಂಗಿನ ಕಾಯಿಯ ಗಣಹೋಮ ನಡೆಸಲ್ಪಡುತ್ತದೆ. ಗಣೇಶ ಚತುರ್ಥಿ, ಮಾಘ ಶುದ್ಧ ಚೌತಿ ವಿಶೇಷ ದಿನವಾಗಿರುತ್ತದೆ.

ಪೂಜಾ ಸಮಯ - 07:15 ಕ್ಕೆ ಬೆಳಗ್ಗಿನ ಪೂಜೆ, ಮದ್ಯಾಹ್ನ ಗಂಟೆ 12:15 ಕ್ಕೆ ಸರಿಯಾಗಿ ಮಹಾಪೂಜೆ, ರಾತ್ರಿ 07:15 ಪೂಜೆ

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಸೌತಡ್ಕಪುರವರಾಧೀಶ್ವರ ಶ್ರೀ ಸಿದ್ಧಿ ಬುದ್ಧಿ ದೇವೀ ಸಮೇತ ಶ್ರೀ ಗಣಪತಿ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಗಜಾನನಂ ಭೂತಗಣಾದಿ ಸೇವಿತಂ | ಕಪಿತ್ಥ ಜಂಬೂಫಲಸಾರ ಭಕ್ಷಿತಮ್ | ಉಮಾಸುತಂ ಶೋಕ ವಿನಾಶಕಾರಣಂ | ನಮಾಮಿ ವಿಘ್ನೇಶ್ವರ ಪಾದಪಂಕಜಮ್ ||

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

## 4. ಮಹಾಲಿಂಗೇಶ್ವರ ದೇವಸ್ಥಾನ ಪುತ್ತೂರು

ಪುತ್ತೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನವು 12 ನೇ ಶತಮಾನದ ದೇವಾಲಯವಾಗಿದೆ. ಇದು ದಕ್ಷಿಣ ಕನ್ನಡದ ಪ್ರಸಿದ್ಧ ದೇವಾಲಯಗಳಲ್ಲಿ ಒಂದಾಗಿದೆ ಹಾಗು ಪುತ್ತೂರು ನಗರದಲ್ಲಿದೆ. ಏಪ್ರಿಲ್ ತಿಂಗಳಲ್ಲಿ ಮಹಾಲಿಂಗೇಶ್ವರ ಜಾತ್ರೆಯನ್ನು 10 ದಿನಗಳ ಕಾಲ ಆಚರಿಸಲಾಗುತ್ತದೆ. ಉತ್ಸವದ ಸಮಯದಲ್ಲಿ ಸುಮಾರು ಒಂದು ಲಕ್ಷ ಜನರು ಪುತ್ತೂರಿಗೆ ಭೇಟಿ ನೀಡುತ್ತಾರೆ.

ದರ್ಶನ ಸಮಯ - ಬೆಳಿಗ್ಗೆ 5:30 AM to 1:00 PM ಮತ್ತು ಸಂಜೆ 4:00 PM to 8:00 PM

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಪುತ್ತೂರು ಪುರವರಾಧೀಶ್ವರ ಶ್ರೀ ಗೌರಿ ದೇವೀ ಸಮೇತ ಶ್ರೀ ಮಹಾಲಿಂಗೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ವನ್ದೇ ಶಂಭು ಉಮಾಪತಿಂ ಸುರಗುರುಂ ವನ್ದೇ ಜಗತ್ಕಾರಣಮ್ |
ವನ್ದೇ ಪನ್ನಗಭೂಷಣಂ ಮೃಗಧರಂ ವನ್ದೇ ಪಶೂನಾಂ ಪತಿಮ್ ||

ಉತ್ಸವಗಳು - ಶಿವರಾತ್ರಿ, ಲಕ್ಷ ದೀಪೋತ್ಸವ ಹಾಗೂ ವಾರ್ಷಿಕ ಜಾತ್ರೆ

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

## 5. ನರಹರಿ ಸದಾಶಿವ ದೇವಸ್ಥಾನ ಪಾಣೆಮಂಗಳೂರು

ಶ್ರೀ ನರಹರಿ ಪರ್ವತ ಸದಾಶಿವ ದೇವಸ್ಥಾನವು ಮಂಗಳೂರು ನಗರದಿಂದ ಸುಮಾರು 30 ಕಿ.ಮೀ ದೂರದಲ್ಲಿದ್ದು, ಮಂಗಳೂರು - ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಪಾಣೆಮಂಗಳೂರು ಪೇಟೆಯ ಸಮೀಪದ ಮೆಲ್ಕಾರಿನ ಹತ್ತಿರವಿರುವ ಗಿರಿಯಲ್ಲಿ ರಾರಾಜಿಸುತ್ತಿದೆ. ಇದು ಅತ್ಯಂತ ಹಳೆಯ ದೇವಾಲಯಗಳಲ್ಲಿ ಒಂದಾಗಿದೆ ಮತ್ತು ಬೆಟ್ಟದ ತುದಿಯಲ್ಲಿದೆ. ಈ ದೇವಸ್ಥಾನವನ್ನು ತಲುಪಲು ಬೆಟ್ಟವನ್ನು ಹತ್ತಿ ಹೋಗಬೇಕು. ಈ ದೇವಸ್ಥಾನದಲ್ಲಿ ಸದಾಶಿವನನ್ನು ಆರಾಧಿಸುತ್ತಾರೆ. ಬೆಟ್ಟದ ಮೇಲೆ ನೀರಿನ ಕೊಳಗಳು ಇವೆ ಮತ್ತು ಈ ಕೊಳದಲ್ಲಿರುವ ನೀರನ್ನು ಭಕ್ತರು ಪವಿತ್ರವೆಂದು ಪರಿಗಣಿಸುತ್ತಾರೆ.

ದರ್ಶನ ಸಮಯ - ಬೆಳಿಗ್ಗೆ 7:30 ರಿಂದ ಸಂಜೆ 7 ರವರೆಗೆ, ಪೂಜೆಗಳು ಬೆಳಿಗ್ಗೆ 8:30, ಮಧ್ಯಾಹ್ನ 12:30 ಮತ್ತು ಸಂಜೆ 6: 30 ಕ್ಕೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ನರಹರಿ ಪುರವರಾಧೀಶ್ವರ ಶ್ರೀ ಮಹೇಶ್ವರಿ ದೇವೀ ಸಮೇತ ಶ್ರೀ ಸದಾಶಿವ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ವಂದೇ ಸೂರ್ಯ ಶಶಾಂಕ ವಹ್ನಿನಯನ ವಂದೇ ಮುಕುನ್ದ ಪ್ರಿಯಮ್ | ವಂದೇ ಭಕ್ತಜನಾಶ್ರಯಂ ಚ ವರದಂ ವಂದೇ ಶಿವಂ ಶಂಕರಮ್ ||

ವಿಶೇಷ ದಿನ - ಶಿವರಾತ್ರಿಯು ಪ್ರಮುಖ ಹಬ್ಬಗಳಲ್ಲಿ ಒಂದಾಗಿದೆ.

ಸುತ್ತಮುತ್ತಲಿನ ಮತ್ತೊಂದು ಬೆಟ್ಟದ ದೇವಾಲಯ 20 ಕಿ.ಮೀ ದೂರದಲ್ಲಿರುವ ಕರಿಂಜೇಶ್ವರ ದೇವಸ್ಥಾನಕ್ಕೂ ಭೇಟಿ ನೀಡಬಹುದು.

## 6. ಕಾರಿಂಜೇಶ್ವರ ದೇವಸ್ಥಾನ ಕಾರಿಂಜ ಬಂಟ್ವಾಳ

ಈ ಕ್ಷೇತ್ರವು ಬಂಟ್ವಾಳ ತಾಲೂಕಿನ ಕಾವಳಮೂಡುರು ಗ್ರಾಮದ ಕಾರಿಂಜ ಎಂಬ ಸ್ಥಳದಲ್ಲಿ ನೆಲೆಗೊಂಡಿದೆ. ಮಂಗಳೂರಿನಿಂದ ಸುಮಾರು 38 ಕಿ.ಮೀ ಮತ್ತು ಬಂಟ್ವಾಳದಿಂದ ಸುಮಾರು 14 ಕಿ.ಮೀ ದೂರದಲ್ಲಿದೆ. ಮಂಗಳೂರು - ಬೆಳ್ತಂಗಡಿ ಮಾರ್ಗದಲ್ಲಿ ವಗ್ಗ ಎಂಬ ಸ್ಥಳದಿಂದ (2 ಕಿಮೀ) ದೇವಸ್ಥಾನಕ್ಕೆ ಹೋಗಬಹುದು. ಸುತ್ತಲೂ ಹಸಿರಿನ ಬೆಟ್ಟದ ಮೇಲೆ ಕಾರಿಂಜೇಶ್ವರ ದೇವಸ್ಥಾನವಿದೆ. ಕಾರಿಂಜೇಶ್ವರವು ಶಿವ-ಪಾರ್ವತಿಯರ ದೇವಸ್ಥಾನವಾಗಿದೆ. ಈ ಬಂಡೆಯ ಬೆಟ್ಟದ ತುದಿಗೆ ಹೋಗುವ ಮೆಟ್ಟಿಲುಗಳು ಬಹಳ ಚೆನ್ನಾಗಿ ನಿರ್ಮಿಸಲ್ಪಟ್ಟಿವೆ ಮತ್ತು ಸುಮಾರು 355 ರಷ್ಟಿದೆ. ಅರ್ಧದಾರಿಯಲ್ಲೇ ಇರುವ ಪಾರ್ವತಿ ದೇವಸ್ಥಾನವನ್ನು ರಸ್ತೆಯ ಮೂಲಕವೂ ತಲುಪಬಹುದು. ಆದರೆ, ಬೆಟ್ಟದ ತುದಿಯಲ್ಲಿರುವ ಕಾರಿಂಜೇಶ್ವರ ದೇವಸ್ಥಾನವನ್ನು ತಲುಪಲು ಮೆಟ್ಟಿಲುಗಳು ಮಾತ್ರ ಮಾರ್ಗವಾಗಿದೆ.

ಸುತ್ತಲಿನ ಆಕರ್ಷಣೆ - ಪಾರ್ವತಿ ದೇವಿ ಮತ್ತು ಗಣಪತಿಯ ಗುಡಿಗಳು, ಪರಿವಾರ ದೈವಗಳಾದ ಕೊಡಮಣಿತ್ತಾಯ ಮತ್ತು ಪಿಲಿಚಾಮುಂಡಿ ಇಲ್ಲಿ ನೆಲೆಸಿವೆ. ಉಗ್ರಾಣಿ ಗುಹೆ, ಗಧಾತೀರ್ಥ, ಅಂಗುಷ್ಟ ಮತ್ತು ಮೊಣಕಾಲು ತೀರ್ಥ, ಪ್ರತಿಧ್ವನಿ ನೀಡುವ 'ನಿನ್ನಿಕಲ್ಲು', 'ಸತ್ಯದಕಲ್ಲು' ಅಥವಾ ಪ್ರಮಾಣದ ಕಲ್ಲು, ವಾನರರ ನೈವೇದ್ಯ ಭಕ್ಷಣೆಯ ಕಲ್ಲುಗಳೂ ಇಲ್ಲಿವೆ.

ದರ್ಶನ ಸಮಯ ಬೆಳಿಗ್ಗೆ 9 ರಿಂದ ಮಧ್ಯಾಹ್ನ 12 ರವರೆಗೆ ಮಹಾಪೂಜೆ ಮಧ್ಯಾಹ್ನ 12 ಕ್ಕೆ ಮತ್ತು ಸಂಜೆ 6 ರಿಂದ 7 ರವರೆಗೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕಾರಿಂಜ ಪುರವರಾಧೀಶ್ವರ ಶ್ರೀ ಪಾರ್ವತೀ ದೇವೀ ಸಮೇತ ಶ್ರೀ ಕಾರಿಂಜೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಕರ್ಪೂರಗೌರಂ ಕರುಣಾವತಾರಂ ಸಂಸಾರಸಾರಂ ಭುಜಗೇಂದ್ರಹಾರಂ | ಸದಾ ವಸಂತಂ ಹೃದಯಾರವಿಂದೇ ಭವಂ ಭವಾನೀಸಹಿತಂ ನಮಾಮಿ ||

ವಿಶೇಷ ದಿನ - ನಾಲ್ಕು ದಿನಗಳವರೆಗೆ ಆಚರಿಸಲಾಗುವ ಶಿವರಾತ್ರಿಯು ಪ್ರಮುಖ ಹಬ್ಬಗಳಲ್ಲಿ ಒಂದಾಗಿದೆ.

## 7. ಮಂಗಳಾದೇವಿ ದೇವಸ್ಥಾನ ಮಂಗಳೂರು

ಶ್ರೀ ಮಂಗಳಾದೇವಿ ದೇವಸ್ಥಾನವು ಮಂಗಳೂರು ನಗರದ ಹೃದಯ ಭಾಗದಲ್ಲಿದ್ದು, ಮಂಗಳಾದೇವಿ ದೇವಸ್ಥಾನದ ಪ್ರಧಾನ ದೇವತೆಯಾದ ಮಂಗಳಾಂಬೆಯಿಂದ ಈ ಪ್ರದೇಶಕ್ಕೆ ಮಂಗಳೂರು ಎಂಬ ಹೆಸರು ಬಂದಿದೆ. ಮಂಗಳೂರು ನಗರ ವಿವಿದ ಕಡೆಗಳಿಂದಲೂ ದೇವಸ್ಥಾನಕ್ಕೆ ತಲುಪಲು ಉತ್ತಮವಾದ ಖಾಸಗಿ ನಗರ ಸಾರಿಗೆಯ ಬಸ್ ಸೌಲಭ್ಯವಿದೆ.

ಈ ದೇವಾಲಯವು ಮಹತ್ವದ ಪ್ರಾಚೀನತೆಯನ್ನು ಹೊಂದಿದ್ದು, ಮಂಗಳದೇವಿಯನ್ನು ಕುಳಿತುಕೊಳ್ಳುವ ಭಂಗಿಯಲ್ಲಿ ಚಿತ್ರಿಸಲಾಗಿದೆ. ಕೇಂದ್ರ ದೇಗುಲವು ಕೆಳಮಟ್ಟದಲ್ಲಿದೆ, ಎತ್ತರದಲ್ಲಿ ನಾಗನ ದೇಗುಲವಿದೆ. ದೇವಿಯ ಎಡಭಾಗದಲ್ಲಿ ಸಣ್ಣ ಲಿಂಗವಿದೆ. ಈ ಪ್ರದೇಶದ ಅನೇಕ ದೇವಾಲಯಗಳಲ್ಲಿ ಕಂಡುಬರುವಂತೆ ದೇವಾಲಯದ ವಾಸ್ತುಶಿಲ್ಪವು ಕೇರಳ ಶೈಲಿಯಲ್ಲಿದೆ.

ದರ್ಶನದ ಸಮಯ - ಬೆಳಿಗ್ಗೆ 6:00 ರಿಂದ 1:00 ರವರೆಗೆ ಮತ್ತು ಸಂಜೆ 4:00 ರಿಂದ 8:00 ಘಂಟೆಯ ವರೆಗೆ,

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಮಂಗಳೂರು ಪುರವರಾಧೀಶ್ವರೀ ಶ್ರೀ ಮಹಾದೇವ ರುದ್ರ ಸಮೇತ ಶ್ರೀ ಮಂಗಳಾ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||

ಉತ್ಸವಗಳು - ನವರಾತ್ರಿ ಉತ್ಸವ, ದೀಪೋತ್ಸವ, ವಾರ್ಷಿಕ ಜಾತ್ರೋತ್ಸವ, ಪ್ರತಿಷ್ಠಾ ಮಹೋತ್ಸವ

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

## 8. ಕುದ್ರೋಳಿ ಗೋಕರ್ಣನಾಥೇಶ್ವರ ದೇವಸ್ಥಾನ, ಮಂಗಳೂರು

ನಗರದ ಹೃದಯ ಭಾಗದಲ್ಲಿರುವ ಕುದ್ರೋಳಿ ಗೋಕರ್ಣನಾಥೇಶ್ವರ ದೇವಸ್ಥಾನವನ್ನು ಕೇರಳದ ಶ್ರೇಷ್ಠ ತತ್ವಜ್ಞಾನಿ, ಸಂತ ಮತ್ತು ಸಾಮಾಜಿಕ ಸುಧಾರಕರಾದ ಶ್ರೀ ನಾರಾಯಣ ಗುರು ನಿರ್ಮಿಸಿದ್ದಾರೆ. ಈ ದೇವಸ್ಥಾನವನ್ನು ಚೋಳರ ಶೈಲಿಯಲ್ಲಿ ನಿರ್ಮಿಸಲಾಗಿದೆ. ಈ ದೇವಸ್ಥಾನದ ಮುಖ್ಯ ಆರಾಧ್ಯ ದೇವರು ಶಿವ. ನವರಾತ್ರಿ ಮತ್ತು ಶಿವರಾತ್ರಿ ಈ ದೇವಾಲಯದಲ್ಲಿ ಆಚರಿಸಲಾಗುವ ಎರಡು ದೊಡ್ಡ ಉತ್ಸವಗಳಾಗಿವೆ. ದಸರಾ ಸಮಯದಲ್ಲಿ ದೇವಾಲಯದ ಆಚರಣೆಗಳು ಜನಪ್ರಿಯವಾಗಿ ಮಂಗಳೂರು ದಸರಾ ಎಂದು ಕರೆಯಲ್ಪಡುತ್ತದೆ.

ದರ್ಶನ ಸಮಯ - ಬೆಳಿಗ್ಗೆ 6:00 AM to 2.00 PM ಮತ್ತು ಸಂಜೆ 4.30 PM to 9.00 PM.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಮಂಗಳೂರು ಪುರವರಾಧೀಶ್ವರ ಶ್ರೀ ಭಗವತಿ ದೇವೀ ಸಮೇತ ಶ್ರೀ ಗೋಕರ್ಣನಾಥೆಶ್ವರ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ನಾಗೇಂದ್ರಹಾರಾಯ ತ್ರಿಲೋಚನಾಯ | ಭಸ್ಮಾಂಗರಾಗಾಯ ಮಹೇಶ್ವರಾಯ | ನಿತ್ಯಾಯ ಶುದ್ಧಾಯ ದಿಗಂಬರಾಯ | ತಸ್ಮೈ "ನ" ಕಾರಾಯ ನಮಃ ಶಿವಾಯ ||

## 9. ಕದ್ರಿ ಮಂಜುನಾಥ ದೇವಸ್ಥಾನ, ಮಂಗಳೂರು

ಮಂಗಳೂರಿನ ಕದ್ರಿ ಮಂಜುನಾಥೇಶ್ವರ ದೇವಸ್ಥಾನ 10-11ನೇ ಶತಮಾನದಲ್ಲಿ ನಿರ್ಮಿಸಲಾಗಿದೆ. ಸುತ್ತ ಹಸಿರು ಕಾನನ, ದೇವಸ್ಥಾನದ ಹಿಂಬದಿ ದೊಡ್ಡ ಬೆಟ್ಟ, ಬೆಟ್ಟದ ಮೇಲೆ ಪಾಂಡವರ ಗುಹೆಗಳು ಎಂದು ಕರೆಯಲ್ಪಡುವ ಕಲ್ಲುಗುಹೆಗಳಿವೆ. ದೇವಾಲಯದ ಹಿಂಭಾಗದಲ್ಲಿ ನೀರಿನ ಚಿಲುಮೆಯೊಂದಿದ್ದು ಪಕ್ಕದಲ್ಲೆ ಇರುವ ಕೊಳಗಳಿಗೆ ಇದರ ನೀರು ಹರಿಯುತ್ತದೆ. ದೇವಸ್ಥಾನವು ಮಂಗಳೂರು ನಗರದ ಹೃದಯ ಭಾಗದಲ್ಲಿದೆ.

ದರ್ಶನ ಸಮಯ - ಬೆಳಿಗ್ಗೆ 6:00 AM to 1.00 PM ಮತ್ತು ಸಂಜೆ 4.00 PM to 8.00 PM.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಮಂಗಳೂರು ಪುರವರಾಧೀಶ್ವರ ಶ್ರೀ ದುರ್ಗಾಪರಮೇಶ್ವರೀ ದೇವೀ ಸಮೇತ ಶ್ರೀ ಕದ್ರಿ ಮಂಜುನಾಥೆಶ್ವರ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಶಿವಾಯ ಗೌರೀ ವದನಾಬ್ಜ ಬೃಂದ | ಸೂರ್ಯಾಯ ದಕ್ಷಾಧ್ವರ ನಾಶಕಾಯ | ಶ್ರೀ ನೀಲಕಂಠಾಯ ವೃಷಭಧ್ವಜಾಯ | ತಸ್ಮೈ "ಶಿ" ಕಾರಾಯ ನಮಃ ಶಿವಾಯ ||

ಭಕ್ತರ ಸೌಲಭ್ಯಗಳು - ಸಮುದಾಯ ಭವನ, ಮಧ್ಯಾಹ್ನ 12.30 ರಿಂದ ಮಧ್ಯಾಹ್ನ 2.00 ರವರೆಗೆ ಎಲ್ಲಾ ಭಕ್ತರಿಗೆ ಊಟ. ವಾಹನ ನಿಲುಗಡೆ, ವಸತಿ ಕಲ್ಪಿಸಲಾಗಿದೆ.

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

ಹತ್ತಿರದ ಆಕರ್ಷಣೆಗಳು - ಜೋಗಿ ಮಠ, ಶ್ರೀ ಕಾಲಬೈರವೇಶ್ವರ ಮಂದಿರ, ಪರಶುರಾಮ ಭೂಮಿ, ಸೀತಾ ಬಾವಿ, ಮತ್ಸ್ಯೇಂದ್ರನಾಥ್, ಗೋರಕ್ಷನಾಥ್, ಚೌರಂಗಿನಾಥ್ ಗುಡಿ, ಪಾತಾಳ ಬೈರವ ಗುಡಿ, ರಾಮ ಲಕ್ಷ್ಮಣ ಧಾರೆ, ಕದ್ರಿ ಪಾರ್ಕ್, ಶ್ರೀಮಂತಿ ಬಾಯಿ ಮ್ಯೂಸಿಯಂ.

## 10. ಅನಂತ ಪದ್ಮನಾಭ ದೇವಸ್ಥಾನ ಕುಡುಪು

ಶ್ರೀ ಕ್ಷೇತ್ರ ಕುಡುಪು ಮಂಗಳೂರು ನಗರದಿಂದ ಸುಮಾರು 10 ಕಿ.ಮೀ ದೂರದಲ್ಲಿರುವ, ಮಂಗಳೂರು - ಮೂಡಬಿದ್ರೆ ರಾಜ್ಯ ಹೆದ್ದಾರಿಯಲ್ಲಿರುವ ಕುಡುಪು ಎಂಬ ಗ್ರಾಮದಲ್ಲಿದೆ. ಈ ಕ್ಷೇತ್ರದ ಮುಖ್ಯ ಆರಾಧ್ಯ ದೇವರು ಶ್ರೀ ಅನಂತ ಪದ್ಮನಾಭ. ಹಾಗೂ ನಾಗದೇವರು. ವಿಶೇಷ ದಿನಗಳು - ಚಂಪಾ ಷಷ್ಠಿ, ನಾಗಪಂಚಮಿ, ಅನಂತ ಚತುರ್ದಶಿ

ಪೂಜಾ ಸಮಯ ಬೆಳಿಗ್ಗೆ 6:00 AM to 1:00 PM ಸಂಜೆ 5:00 PM to 8:00 PM

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕಡಪು ಪುರವರಾಧೀಶ್ವರ ಶ್ರೀ ಭೂದೇವೀ ಶ್ರೀದೇವೀ ಸಮೇತ ಶ್ರೀ ಅನಂತಪದ್ಮನಾಭ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ |
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ | ಲಕ್ಷ್ಮೀಕಾಂತಂ
ಕಮಲನಯನಂ ಯೋಗಿಭಿಧ್ಯಾರ್ನಗಮ್ಯಂ | ವಂದೇ ವಿಷ್ಣುಂ ಭವಭಯಹರಂ
ಸರ್ವಲೋಕೈಕನಾಥಂ ||

ದೇವರ ಅನುಗ್ರಹಕ್ಕಾಗಿ ಬಾಳೆಹಣ್ಣು - ತೆಂಗಿನಕಾಯಿಯ ಸಮರ್ಪಣೆ, ಪಾಪ ಪರಿಹಾರಕ್ಕೆ ಹಾಲು ನೈವೇದ್ಯ, ಅಭಿಷೇಕ, ಐಶ್ವರ್ಯಕ್ಕೆ ವೀಳ್ಯದೆಲೆ, ಸಂತೋಷಕ್ಕೆ ಹೂವು, ಭೋಗ ಪ್ರಾಪ್ತಿಗೆ ನೈವೇದ್ಯ, ಚತುರ್ವರ್ಗ ಫಲಕ್ಕೆ ಪ್ರದಕ್ಷಿಣೆ ನಮಸ್ಕಾರ, ಇಷ್ಟಾರ್ಥ ಸಿದ್ಧಿಗಾಗಿ ಹೋಮ, ಪಾಪ ಪರಿಹಾರ - ಅಷ್ಟೈಶ್ವರ್ಯಕ್ಕಾಗಿ ಜಪ, ಸಾನ್ನಿಧ್ಯ ಅಭಿವೃದ್ಧಿ - ಜ್ಞಾನಾಭಿವೃದ್ಧಿಗಾಗಿ ಪಾರಾಯಣ, ಅಜ್ಞಾನ ಪರಿಹಾರಕ್ಕೆ ದೀಪ-ಆರತಿ, ದೋಷಪರಿಹಾರಕ್ಕೆ ತೀರ್ಥ ಸ್ನಾನ, ಜನ್ಮ ಸಫಲತೆಗೆ ತುಲಸೀ ಅರ್ಚನ, ಹೀಗೆ ಯಾವುದೇ ಸೇವೆಯಿಂದಲೂ ಇಷ್ಟಸಿದ್ಧಿಯಾಗಬಹುದು. ಕುಡುಪು ಕ್ಷೇತ್ರದಲ್ಲಿ ಆಶ್ಲೇಷಾ ಬಲಿಯು ಮುಖ್ಯ ಸೇವೆಯಾಗಿದೆ. ಶ್ರೀ ಕ್ಷೇತ್ರ ಸುಬ್ರಹ್ಮಣ್ಯದಷ್ಟೇ ಪಾವಿತ್ಯತೆ ಹೊಂದಿರುವ ಕುಡುಪು ಕ್ಷೇತ್ರದಲ್ಲಿ ನಾಗ ಸಂಬಂದಿತ ಎಲ್ಲಾ ದೋಷಗಳಿಗೆ ಪರಿಹಾರ ಕಾಣಬಹುದಾಗಿದೆ.

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

ಇಲ್ಲಿಂದ ಸುಮಾರು 4.6 ಕಿ.ಮೀ ದೂರದಲ್ಲಿರುವ ವಾಮಜೂರು ಶ್ರೀ ಅಮೃತೇಶ್ವರ ದೇವಸ್ಥಾನಕ್ಕೆ ಭೇಟಿಕೊಡಬಹುದು.

## 11. ರಾಜ ರಾಜೇಶ್ವರಿ ದೇವಸ್ಥಾನ ಪೊಳಲಿ ಬಂಟ್ವಾಳ

ಈ ದೇವಾಲಯವು ಬಂಟ್ವಾಳ ತಾಲೂಕಿನ ಕರಿಯಾಂಗಳ ಗ್ರಾಮದ ಫಾಲ್ಗುಣಿ ನದಿಯ ದಡದಲ್ಲಿದೆ. ಈ ಕ್ಷೇತ್ರ ಮಂಗಳೂರು ನಗರದಿಂದ 20 ಕಿ.ಮೀ ದೂರದಲ್ಲಿದೆ ಮತ್ತು ಮಂಗಳೂರಿನ ವಿಮಾನ ನಿಲ್ದಾಣದಿಂದ (ಬಜ್ಪೆ) ಸುಮಾರು 10 ಕಿ.ಮೀ. ದೂರದಲ್ಲಿದೆ.

ಈ ದೇವಾಲಯವು ಹಿಂದೂ ವಾಸ್ತುಶಿಲ್ಪವನ್ನು ತಾಮ್ರದ ಫಲಕಗಳಿಂದ, ಮರದ ಕೆತ್ತನೆಗಳಿಂದ ಅಲಂಕರಿಸಲ್ಪಟ್ಟ ಛಾವಣಿಗಳನ್ನು ಹೊಂದಿರುತ್ತದೆ. ಮುಖ್ಯ ಅರ್ಚಕ ಮಾಧವ ಭಟ್ ಅವರ ಮೇಲ್ವಿಚಾರಣೆಯಲ್ಲಿ ದೇವಾಲಯದ ದೈನಂದಿನ ಮತ್ತು ವಿಶೇಷ ಪೂಜೆಗಳನ್ನು ನಡೆಸಲಾಗುತ್ತದೆ. ಬೆಳಗಿನ ಪೂಜೆ ಬೆಳಿಗ್ಗೆ 8.30 ಕ್ಕೆ; ಮಧ್ಯಾಹ್ನ 12.30 ಕ್ಕೆ ಮಹಾಪೂಜ ಮತ್ತು ರಾತ್ರಿ 8.30 ಕ್ಕೆ ರಾತ್ರಿ ಪೂಜೆ ನಡೆಸಲಾಗುತ್ತದೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಪೊಳಲಿ ಪುರವರಾಧೀಶ್ವರೀ ಶ್ರೀ ರಾಜಾರಾಜೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಅಂಬಾ ಶಾಂಭವಿ ಚಂದ್ರಮೌಳಿರಬಲಾಽಪರ್ಣಾ ಉಮಾ ಪಾರ್ವತೀ
ಕಾಲೀ ಹೈಮವತೀ ಶಿವಾ ತ್ರಿನಯನೀ ಕಾತ್ಯಾಯನೀ ಭೈರವೀ |
ಸಾವಿತ್ರೀ ನವಯೌವನಾ ಶುಭಕರೀ ಸಾಮ್ರಾಜ್ಯಲಕ್ಷ್ಮೀಪ್ರದಾ
ಚಿದ್ರೂಪೀ ಪರದೇವತಾ ಭಗವತೀ ಶ್ರೀರಾಜರಾಜೇಶ್ವರೀ ||

ಪೊಳಲಿ ಜಾತ್ರೆಯಲ್ಲಿ ನಡೆಯುವ 'ಪೊಳಲಿ ಚೆಂಡು' ಇಲ್ಲಿಯ ಪ್ರಮುಖ ಆಕರ್ಷಣೆ. ಎರಡು ಪಂಗಡಗಳ ನಡುವೆ ಈ ಆಟವನ್ನು ಏರ್ಪಡಿಸಲಾಗುತ್ತದೆ. ಇದು ಒಳ್ಳೆಯ ಮತ್ತು ಕೆಟ್ಟದರ ನಡುವಿನ ಹೋರಾಟವನ್ನು ಸಾಂಕೇತಿಸುತ್ತದೆ. ಮಾರ್ಚ್-ಏಪ್ರಿಲ್ ತಿಂಗಳಲ್ಲಿ ನಡೆಯುವ ಈ ವಾರ್ಷಿಕ ಉತ್ಸವವು ಒಂದು ತಿಂಗಳ ಕಾಲ ನಡೆಯುತ್ತದೆ ಮತ್ತು ಪ್ರಪಂಚದಾದ್ಯಂತದ ಜನರು ಈ ಉತ್ಸವವನ್ನು ನೋಡಲು ಬರುತ್ತಾರೆ.

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

## 12. ಕಟೀಲು ದುರ್ಗಾ ಪರಮೇಶ್ವರಿ ದೇವಸ್ಥಾನ

ಮಂಗಳೂರಿನಿಂದ 20 ಕಿಮಿ ದೂರದಲ್ಲಿ, ನಂದಿನಿ ಎಂಬ ಒಂದು ಪುಟ್ಟ ನದಿಯ ಮಧ್ಯದಲ್ಲಿರುವ ಒಂದು ಸಣ್ಣ ದ್ವೀಪದ ಮೇಲಿರುವ ಕಟೀಲು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ದಕ್ಷಿಣಕನ್ನಡ ಜಿಲ್ಲೆಯ ಪ್ರಮುಖ ದೇವಸ್ಥಾನಗಳಲ್ಲೊಂದು. ಜಿಲ್ಲೆಯ ಅನೇಕ ದೇವಾಲಯಗಳಂತೆ ಕಟೀಲು ದೇಗುಲವೂ ವಿದ್ಯಾದಾನ ಮತ್ತು ಅನ್ನದಾನಗಳ ಮೂಲಕ ಸಮಾಜೋನ್ನತಿಗೆ ತನ್ನ ಕಾಣಿಕೆ ಸಲ್ಲಿಸುತ್ತಿದೆ. ಪ್ರತಿ ವರ್ಷವೂ ಸಾವಿರಾರು ಯಾತ್ರಿಕರು ಇಲ್ಲಿಗೆ ತಾಯಿ ದುರ್ಗಾ ಪರಮೇಶ್ವರಿಯ ದರ್ಶನಕ್ಕಾಗಿ ಭೇಟಿ ನೀಡುತ್ತಾರೆ.

ದೇವಾಲಯವನ್ನು ಕೇರಳ ಶೈಲಿಯಲ್ಲಿ ನಿರ್ಮಿಸಲಾಗಿದೆ, ನಿಂತಿರುವ ಭಂಗಿಯಲ್ಲಿ ದುರ್ಗಾ ದೇವಿಯ ಸುಂದರವಾದ ಚಿನ್ನದ ಲೇಪಿತ ವಿಗ್ರಹವನ್ನು ಮುಖ್ಯ ಗರ್ಭಗೃಹದಲ್ಲಿ ಇರಿಸಲಾಗಿದೆ. ದೇವತೆಯನ್ನು ಚಿನ್ನ ಮತ್ತು ವಜ್ರದ ಮಾಲೆಗಳು ಮತ್ತು ಕಿರೀಟದಿಂದ ಅಲಂಕರಿಸಲಾಗಿದೆ.

ಪ್ರಾತಃಕಾಲ 5.30ಕ್ಕೆ ತೆರೆದು ರಾತ್ರಿ 9.30ಕ್ಕೆ ಮುಚ್ಚುತ್ತದೆ. ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಯ ವ್ಯಾಪ್ತಿಯಲ್ಲಿದೆ. ದೇವಸ್ಥಾನವು ಅನೇಕ ಬಗೆಯ ಕಲೆಗಳಿಗೆ ಆಶ್ರಯವನ್ನು, ಪ್ರೋತ್ಸಾಹವನ್ನು ನೀಡುತ್ತಿದೆ. ಆವುಗಳಲ್ಲಿ ಮುಖ್ಯವಾದ್ದು ಯಕ್ಷಗಾನ. 6 ಯಕ್ಷಗಾನ ಮೇಳಗಳು ಸೇವಾರೂಪದಲ್ಲಿ ಯಕ್ಷಗಾನ ಬಯಲಾಟವನ್ನು ನಡೆಸಿಕೊಡುತ್ತವೆ. ವಿಶೇಷ ದಿನಗಳಂದು ಇಲ್ಲಿ ಚಂಡಿಕಾ ಹೋಮ, ತುಲಾಭಾರ, ವೇದ ಪಾರಾಯಣ, ಹರಿಕಥೆ ಮೊದಲಾದ ಧಾರ್ಮಿಕ ಕಾರ್ಯಕ್ರಮಗಳು ಇಲ್ಲಿ ಜರುಗುತ್ತವೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕಟೀಲು ಪುರವರಾಧೀಶ್ವರೀ ಶ್ರೀ ಪರಮೇಶ್ವರ ಸ್ವಾಮೀ ಸಮೇತ ಶ್ರೀ ದುರ್ಗಾಪರಮೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಪದ್ಮಾಸನಸ್ಥಿತೇ ದೇವಿ ಪರಬ್ರಹ್ಮಸ್ವರೂಪಿಣಿ |
ಪರಮೇಶಿ ಜಗನ್ಮಾತರ್ಮಹಾಲಕ್ಷ್ಮಿ ನಮೋಽಸ್ತುತೇ ||

ಉತ್ಸವಗಳು - ವಾರ್ಷಿಕ ಜಾತ್ರೆ, ಲಕ್ಷ ದೀಪೋತ್ಸವ, ಶರನ್ನವರಾತ್ರಿ, ವಸಂತೋತ್ಸವ.

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

ಹತ್ತಿರದ ಪ್ರೇಕ್ಷಣೀಯ ತಾಣಗಳು - ಶ್ರೀ ಸೋಮನಾಥೇಶ್ವರ ದೇವಸ್ಥಾನ ನೆಲ್ಲಿತೀರ್ಥ 20 ಕಿ.ಮೀ. ಮೂಡಬಿದ್ರಿ ಸಾವಿರ ಕಂಬ ಬಸದಿ 22 ಕಿ.ಮೀ

## 13. ದುರ್ಗಾಪರಮೇಶ್ವರಿ ದೇವಸ್ಥಾನ ಬಪ್ಪನಾಡು ಮುಲ್ಕಿ

ಮಂಗಳೂರಿನಿಂದ ಉತ್ತರಕ್ಕೆ 30 ಕಿಮಿ ದೂರದಲ್ಲಿ (ಉಡುಪಿ ಮಾರ್ಗದಲ್ಲಿ) ಶಾಂಭವಿ ನದಿಯ ತಟದಲ್ಲಿ ಈ ದೇವಾಲಯವಿದೆ. ಈ ದೇವಸ್ಥಾನದ ಮುಖ್ಯ ಆರಾಧ್ಯ ದೇವತೆ ಶ್ರೀ ದುರ್ಗಾಪರಮೇಶ್ವರಿ. ಇಲ್ಲಿ ಮುಖ್ಯ ದೇವತೆಯು ಲಿಂಗ (ಸಾಂಕೇತಿಕ ಪ್ರತಿಮೆ) ರೂಪದಲ್ಲಿದೆ, ಇದು ಈ ದೇವಾಲಯದ ವಿಶಿಷ್ಟತೆಯಾಗಿದೆ. ಐದು ಲಿಂಗಗಳನ್ನು ಮೂಲ ದುರ್ಗಾ, ಅಗ್ನಿ ದುರ್ಗಾ, ಜಲ ದುರ್ಗಾ, ವನ ದುರ್ಗಾ ಮತ್ತು ಅಗ್ರ ದುರ್ಗಾ ಎಂದು ಒಂದೇ ಪಾಣೀಪೀಠದಲ್ಲಿ ಪೂಜಿಸಲಾಗುತ್ತದೆ ಮತ್ತು ದುರ್ಗಾ ವಿಗ್ರಹವನ್ನು ಮುಂದೆ ಇಡಲಾಗಿದೆ.

ಈ ದೇವಳದ ಒಂದು ವೈಶಿಷ್ಟ್ಯ ಬಪ್ಪನಾಡು ಡೋಲು. ದೇವಳದ ವಾರ್ಷಿಕ ಉತ್ಸವದ ಸಮಯದಲ್ಲಿ ಬಪ್ಪನಾಡು ಡೋಲು (ಚಂಡೆ) ಬಾರಿಸುವುದು ಆಚರಣೆಯ ಪ್ರಮುಖ ಭಾಗವಾಗಿದೆ.

ದರ್ಶನ ಸಮಯ - ಬೆಳಿಗ್ಗೆ 5:30 AM to 2:00 PM. ಸಂಜೆ 4:00 PM to 9:00 PM

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಬಪ್ಪನಾಡು ಪುರವರಾಧೀಶ್ವರೀ ಶ್ರೀ ಪರಮೇಶ್ವರ ಸ್ವಾಮೀ ಸಮೇತ ಶ್ರೀ ದುರ್ಗಾಪರಮೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ ॥

ಪ್ರಣಾಮ ಸ್ತೋತ್ರ - ನಮಸ್ತೇಽಸ್ತು ಮಹಾಮಾಯೇ ಶ್ರೀಪೀಠೇ ಸುರಪೂಜಿತೇ ।
ಶಂಖಚಕ್ರಗದಾಹಸ್ತೇ ಮಹಾಲಕ್ಷ್ಮಿ ನಮೋಽಸ್ತುತೇ ॥

ಉತ್ಸವಗಳು - ಶರನ್ ನವರಾತ್ರಿ, ಬ್ರಹ್ಮ ರಥೋತ್ಸವ, ದೀಪೋತ್ಸವ,

ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

ಹತ್ತಿರದಲ್ಲಿರುವ ದೇವಾಲಯಗಳು - ಶ್ರೀ ವೆಂಕಟರಮಣ ದೇವಸ್ಥಾನ, ಮುಲ್ಕಿ 1 ಕಿ.ಮೀ. ಶ್ರೀ ಮಹಾಲಕ್ಷ್ಮಿ ದೇವಸ್ಥಾನ, ಉಚ್ಚಿಲಾ 15 ಕಿ.ಮೀ. ಶ್ರೀ ದುರ್ಗಪರಮೇಶ್ವರಿ ದೇವಸ್ಥಾನ, ಕಟೀಲ್ 12 ಕಿ.ಮೀ. ಶ್ರೀ ಭಾಗವತಿ ದೇವಸ್ಥಾನ, ಸಸಿಹಿತ್ಲು 14 ಕಿ.ಮೀ. ಶ್ರೀ ದುರ್ಗಪರಮೇಶ್ವರಿ ದೇವಸ್ಥಾನ, ಮುಂಡ್ಕೂರ್ 15 ಕಿ.ಮೀ. ಶ್ರೀ ದುರ್ಗಪರಮೇಶ್ವರಿ ದೇವಸ್ಥಾನ, ಚಿತ್ರಪುರ 15 ಕಿ.ಮೀ.

## 14. ದಕ್ಷಿಣಕನ್ನಡ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಸೋಮನಾಥ ದೇವಸ್ಥಾನ, ಸೋಮೇಶ್ವರ, ಮಂಗಳೂರು ತಾಲ್ಲೂಕು
2. ಶ್ರೀ ಚಿತ್ರಾಪುರ ದುರ್ಗಾಪರಮೇಶ್ವರೀ ದೇವಸ್ಥಾನ, ಕುಳಾಯಿ, ಮಂಗಳೂರು ತಾಲ್ಲೂಕು
3. ಶ್ರೀ ನಂದನೇಶ್ವರ ದೇವಸ್ಥಾನ, ಪಣಂಬೂರು, ಮಂಗಳೂರು ತಾಲ್ಲೂಕು
4. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಪಾಂಡೇಶ್ವರ, ಮಂಗಳೂರು
5. ಶ್ರೀ ಮಹಾಗಣಪತಿ ದೇವಸ್ಥಾನ, ಕಾಟಿಪಳ್ಳ, ಮಂಗಳೂರು ತಾಲ್ಲೂಕು
6. ಶ್ರೀ ಮಾರಿಯಮ್ಮ ಮಹಿಷಮರ್ದಿನಿ ದೇವಸ್ಥಾನ, ಬೋಳಾರ, ಮಂಗಳೂರು
7. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕಾವೂರು, ಮಂಗಳೂರು ತಾಲ್ಲೂಕು
8. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಇಡ್ಯಾ ಸುರತ್ಕಲ್, ಮಂಗಳೂರು ತಾಲ್ಲೂಕು
9. ಶ್ರೀ ಕೊಂಡಾಣ ಪಿಲಿಚಾಮುಂಡಿ ದೈವಸ್ಥಾನ ಮತ್ತು ಮುಂಡಿತ್ತಾಯ ದೈವಸ್ಥಾನ, ಕೋಟೆಕಾರು, ಮಂಗಳೂರು ತಾಲ್ಲೂಕು
10. ಶ್ರೀ ಕರಣೀಕ ಹನುಮಂತ ದೇವಸ್ಥಾನ, ಮಂಗಳೂರು
11. ಶ್ರೀ ಇಷ್ಟದೇವತಾ ಬಲವಂಡಿ ವ್ಯಾಘ್ರ ಚಾಮುಂಡಿ ದೈವಸ್ಥಾನ, ಪಡುಪೆರಾರ, ಮಂಗಳೂರು ತಾಲ್ಲೂಕು
12. ಶ್ರೀ ಪೊನ್ನಗಿರಿ ಮಹಾಲಿಂಗೇಶ್ವರ ದೇವಸ್ಥಾನ, ಸೂರಿಂಜೆ, ಮಂಗಳೂರು ತಾಲ್ಲೂಕು
13. ಶ್ರೀ ಸದಾಶಿವ ದೇವಸ್ಥಾನ, ಸುರತ್ಕಲ್, ಮಂಗಳೂರು ತಾಲ್ಲೂಕು
14. ಶ್ರೀ ಹಳೇಕೋಟೆ ಮುಖ್ಯಪ್ರಾಣ ದೇವಸ್ಥಾನ, ಬೋಳಾರ, ಮಂಗಳೂರು
15. ಶ್ರೀ ಪಂಚಲಿಂಗೇಶ್ವರ ದೇವಸ್ಥಾನ, ಕಂಕನಾಡಿ ಬಿ, ಬಜಾಲು, ಮಂಗಳೂರು ತಾಲ್ಲೂಕು
16. ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಕಡಂದಲೆ, ಮಂಗಳೂರು ತಾಲ್ಲೂಕು
17. ಶ್ರೀ ವಿಷ್ಣುಮೂರ್ತಿ ದೇವಸ್ಥಾನ, ಕುಳಾಯಿ, ಮಂಗಳೂರು ತಾಲ್ಲೂಕು

18. ಶ್ರೀ ದುರ್ಗಾಪರಮೇಶ್ವರಿ ದೇವಿ ದೇವಸ್ಥಾನ, ಇರುವೈಲು, ಮಂಗಳೂರು ತಾಲ್ಲೂಕು
19. ಶ್ರೀ ಚಕ್ರಪಾಣಿ ಗೋಪಿನಾಥ ದೇವಸ್ಥಾನ, ಅತ್ತಾವರ, ಮಂಗಳೂರು ತಾಲ್ಲೂಕು
20. ಶ್ರೀ ಆದಿನಾಥೇಶ್ವರ ದೇವಸ್ಥಾನ, ಅದ್ಯಪಾಡಿ, ಮಂಗಳೂರು ತಾಲ್ಲೂಕು
21. ಶ್ರೀ ಕೊಡಮಂತಾಯ ದೈವಸ್ಥಾನ, ಶಿಬರೂರು, ದೇಲಂತಬೆಟ್ಟು, ಮಂಗಳೂರು ತಾಲ್ಲೂಕು
22. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಪಾವಂಜೆ, ಮಂಗಳೂರು ತಾಲ್ಲೂಕು
23. ಶ್ರೀ ಆದಿ ಜನಾರ್ಧನ ದೇವಸ್ಥಾನ, ಶೀಮಂತೂರು, ಮಂಗಳೂರು ತಾಲ್ಲೂಕು
24. ಶ್ರೀ ದುರ್ಗಾಪರಮೇಶ್ವರಿ ದೇವಿ ದೇವಸ್ಥಾನ, ತಲಪಾಡಿ, ಮಂಗಳೂರು ತಾಲ್ಲೂಕು
25. ಶ್ರೀ ಅಮೃತೇಶ್ವರ ದೇವಸ್ಥಾನ, ತಿರುವೈಲು, ಮಂಗಳೂರು ತಾಲ್ಲೂಕು
26. ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ತೋಕೂರು, ಹಳೆಯಂಗಡಿ, ಮಂಗಳೂರು ತಾಲ್ಲೂಕು
27. ಶ್ರೀ ಕೋಡಮಂತಾಯ ದೈವಸ್ಥಾನ, ಎಕ್ಕಾರು, ಮಂಗಳೂರು ತಾಲ್ಲೂಕು
28. ಶ್ರೀ ಸೂರ್ಯನಾರಾಯಣ ದೇವಸ್ಥಾನ, ಮರೋಳಿ, ಮಂಗಳೂರು
29. ಶ್ರೀ ಸೋಮನಾಥ ದೇವಸ್ಥಾನ ಪುತ್ತಿಗೆ, ಮೂಡಬಿದ್ರೆ, ಮಂಗಳೂರು ತಾಲ್ಲೂಕು
30. ಶ್ರೀ ವೆಂಕಟ್ರಮಣ ಉಗ್ರನರಸಿಂಹ ದೇವಸ್ಥಾನ ಮುಲ್ಕಿ, ಮಂಗಳೂರು ತಾಲ್ಲೂಕು
31. ಶ್ರೀ ವಿನಾಯಕ ಶಂಕರ ನಾರಾಯಣ ದುರ್ಗಾಂಬ ದೇವಸ್ಥಾನ, ನಂದಾವರ, ಬಂಟ್ವಾಳ ತಾಲ್ಲೂಕು
32. ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಬಂಟ್ವಾಳ ಬಂಟ್ವಾಳ ತಾಲ್ಲೂಕು
33. ಶ್ರೀ ಲಕ್ಷ್ಮೀ ನರಸಿಂಹ ದೇವಸ್ಥಾನ, ಕಡೇಶ್ವಾಲ್ಯ, ಬಂಟ್ವಾಳ ತಾಲ್ಲೂಕು
34. ಶ್ರೀ ಪಂಚಲಿಂಗೇಶ್ವರ ದೇವಸ್ಥಾನ, ವಿಟ್ಲ, ಬಂಟ್ವಾಳ ತಾಲ್ಲೂಕು
35. ಶ್ರೀ ನರಹರಿ ಪರ್ವತ ಸದಾಶಿವ ದೇವಸ್ಥಾನ, ಅಮ್ಟೂರು, ಬಂಟ್ವಾಳ ತಾಲ್ಲೂಕು
36. ಶ್ರೀ ನಿಟಿಲಾಕ್ಷ ಸದಾಶಿವ ದೇವಸ್ಥಾನ, ಗೋಳ್ತಮಜಲು, ಕಲ್ಲಡ್ಕ, ಬಂಟ್ವಾಳ ತಾಲ್ಲೂಕು

37. ಶ್ರೀ ಕಾರಿಂಜೇಶ್ವರ ದೇವಸ್ಥಾನ, ಕಾವಳ ಮೂಡ್ನೂರು, ಬಂಟ್ವಾಳ ತಾಲ್ಲೂಕು
38. ಶ್ರೀ ಮೊಂಟೆತಡ್ಕ ದುರ್ಗಾಪರಮೇಶ್ವರಿ ದೇವಸ್ಥಾನ, ಶಿಬಾಜೆ, ಬೆಳ್ತಂಗಡಿ ತಾಲ್ಲೂಕು
39. ಶ್ರೀ ಗೋಮಟೇಶ್ವರ ದೇವಸ್ಥಾನ, ವೇಣುರು, ಬೆಳ್ತಂಗಡಿ ತಾಲ್ಲೂಕು
40. ಶ್ರೀ ಪಂಚದುರ್ಗಾಪರಮೇಶ್ವರಿ ದೇವಿ ದೇವಸ್ಥಾನ, ಅರಂಬೋಡಿ, ಬೆಳ್ತಂಗಡಿ ತಾಲ್ಲೂಕು
41. ಶ್ರೀ ಸೋಮನಾಥ ದೇವಸ್ಥಾನ, ಕುತ್ಯಾರು, ಬೆಳ್ತಂಗಡಿ, ಬೆಳ್ತಂಗಡಿ ತಾಲ್ಲೂಕು
42. ಶ್ರೀ ಜನಾರ್ಧನ ದೇವಸ್ಥಾನ, ಉಜಿರೆ, ಬೆಳ್ತಂಗಡಿ ತಾಲ್ಲೂಕು
43. ಶ್ರೀ ಸೂರ್ಯನಾರಾಯಣ ದೇವಸ್ಥಾನ, ನಾರಾವಿ, ಬೆಳ್ತಂಗಡಿ ತಾಲ್ಲೂಕು
44. ಶ್ರೀ ಅನಂತೇಶ್ವರ ದೇವಸ್ಥಾನ, ಬಳ್ಳಮಂಜ, ಮಚ್ಚಿನ, ಬೆಳ್ತಂಗಡಿ ತಾಲ್ಲೂಕು
45. ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಶರವೂರು, ಅಲಂಕಾರು ಗ್ರಾಮ, ಪುತ್ತೂರು ತಾಲ್ಲೂಕು
46. ಶ್ರೀ ಸಹಸ್ರಲಿಂಗೇಶ್ವರ ದೇವಸ್ಥಾನ, ಉಪ್ಪಿನಂಗಡಿ, ಪುತ್ತೂರು ತಾಲ್ಲೂಕು
47. ಶ್ರೀ ಚೆನ್ನಕೇಶವ ದೇವಸ್ಥಾನ, ಸುಳ್ಯ, ಸುಳ್ಯ ತಾಲ್ಲೂಕು
48. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ತೋಡಿಕಾನ, ಸುಳ್ಯ ತಾಲ್ಲೂಕು
49. ಶ್ರೀ ಪರಿವಾರ ಪಂಚಲಿಂಗೇಶ್ವರ ದೇವಸ್ಥಾನ, ಪಂಜ, ಸುಳ್ಯ ತಾಲ್ಲೂಕು
50. ಶ್ರೀ ಅಜಪಿಲ ಮಹಾಲಿಂಗೇಶ್ವರ ದೇವಸ್ಥಾನ, ಬೆಳ್ಳಾರೆ, ಸುಳ್ಯ ತಾಲ್ಲೂಕು
51. ಶ್ರೀ ಹರಿಹರೇಶ್ವರ ದೇವಸ್ಥಾನ, ಹರಿಹರ ಪಲ್ಲತಡ್ಕ ಗ್ರಾಮ, ಸುಳ್ಯ ತಾಲ್ಲೂಕು
52. ಶ್ರೀ ಅನಂತೇಶ್ವರ ಸಿದ್ಧಿವಿನಾಯಕ ದೇವಸ್ಥಾನ, ಮಧುರ, ಕಸರಕೊಡ ಜಿಲ್ಲೆ ಕೇರಳಾ

## 15. ದಕ್ಷಿಣಕನ್ನಡ ಜಿಲ್ಲೆಯ ಪ್ರಯಾಣ ಮಾರ್ಗ ಸೂಚಿಗಳು

1. ಕೇಂದ್ರ - ಮಂಗಳೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಕದ್ರಿ ಮಂಜುನಾಥ ದೇವಸ್ಥಾನ >> ಕುದ್ರೋಳಿ ಗೋಕರ್ಣನಾಥೇಶ್ವರ ದೇವಸ್ಥಾನ >> ಕುದ್ರೋಳಿ ಶ್ರೀ ಭಾಗವತಿ ದೇವಸ್ಥಾನ, >> ಮಂಗಳದೇವಿ ದೇವಸ್ಥಾನ >> ಉಳ್ಳಾಲ ಸಮುದ್ರತೀರ >> ಸೋಮೇಶ್ವರ ದೇವಸ್ಥಾನ, ಮತ್ತು ಸೋಮೇಶ್ವರ ಸಮುದ್ರತೀರ.
2. ಕೇಂದ್ರ - ಮಂಗಳೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಪುಲಿಕುಲಾ ನಿಸರ್ಗಾ ಧಮಾ >> ಕಟಿಲ ದುರ್ಗಾ ಪರಮೇಶ್ವರಿ ದೇವಿಯ ದೇವಾಲಯ >> ತನ್ನೀರ ಬಾವಿ ಸಮುದ್ರತೀರ ಮತ್ತು ಪನಂಬೂರ್ ಸಮುದ್ರತೀರ.

# 4. ಹಾಸನ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಹಾಸನ ಒಂದು ದಕ್ಷಿಣಒಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ದಕ್ಷಿಣಕನ್ನಡ, ಕೊಡಗು, ಮೈಸೂರು, ಮಂಡ್ಯ, ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲೆಗಳು ಸುತ್ತುವರಿದಿವೆ. ಹಾಸನ ಪಟ್ಟಣವು ಜಿಲ್ಲಾ ಕೇಂದ್ರ. ಆಲೂರು, ಅರಕಲಗೂಡು, ಅರಸೀಕೆರೆ, ಬೇಲೂರು, ಚನ್ನರಾಯಪಟ್ಟಣ, ಹಾಸನ, ಹೊಳೆನರಸೀಪುರ, ಸಕಲೇಶಪುರ ಎಂಬ 8 ತಾಲ್ಲೂಕುಗಳನ್ನು ಹೊಂದಿದೆ.

ಹಾಸನವನ್ನು "ಬಡ ಮನುಷ್ಯನ ಊಟಿ" ಎಂದು ಕರೆಯಲಾಗುತ್ತದೆ. ಹಾಸನ ಜಿಲ್ಲೆಗೆ ಜೈನರ ಮತ್ತು ಹೊಯ್ಸಳ ಸಾಮ್ರಾಜ್ಯದೊಂದಿಗೆ ಸೇರಿದ ಶ್ರೀಮಂತ ಇತಿಹಾಸವಿದೆ. ಕಾಫಿ, ಕರಿಮೆಣಸು, ಆಲೂಗೆಡ್ಡೆ, ಭತ್ತ ಮತ್ತು ಕಬ್ಬು ಇಲ್ಲಿನ ಪ್ರಮುಖ ಬೆಳೆಗಳು.

ಹಾಸನ ಜಿಲ್ಲೆಯಯಲ್ಲಿ ಹೇಮಾವತಿ, ಕಾವೇರಿ, ಯಗಚಿ ನದಿಗಳು ಮುಖ್ಯವಾದವು.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಹಾಸನ, ಮಂಜರಾಬಾದ್ ಕೋಟೆ ಸಕಲೇಶಪುರ, ಗೊರೂರು ಅಣೆಕಟ್ಟು, ಯಗಚಿ ಅಣೆಕಟ್ಟು, ಬಿಸ್ಲೆ ಘಾಟ್ ಚಾರಣ ಮುಂತಾದವು ಹಾಸನ ಜಿಲ್ಲೆಯ ಪ್ರವಾಸೀ ಆಕರ್ಷಣೆಗಳು.

ದಕ್ಷಿಣ ಕರ್ನಾಟಕದ ಅಡುಗೆಗಳನ್ನು ಸವಿಯಬಹುದು.


HASANA DISTRICT
KARNATAKA
N
CHIKMAGALUR DISTRICT
TUMKUR DISTRICT
DAKSHIN KANNADA DISTRICT
KODAGU DISTRICT
MYSORE DISTRICT
MANDYA DISTRICT
BELUR
ARKALGUD
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters
Hilly area

## 1. ಚನ್ನಕೇಶವ ದೇವಸ್ಥಾನ, ಬೇಲೂರು

ಹಾಸನದಿಂದ 38 ಕಿ.ಮೀ.ದೂರದಲ್ಲಿ ಯಗಚಿ ನದಿಯ ದಂಡೆಯ ಮೇಲಿರುವ ಬೇಲೂರು ಜಗತ್ಪ್ರಸಿದ್ಧ ಪ್ರವಾಸಿ ತಾಣವಾಗಿದೆ. ಬೇಲೂರು ಹಿಂದೆ ಹೊಯ್ಸಳರ ರಾಜಧಾನಿಯಾಗಿದ್ದಿತು. ಇತಿಹಾಸದ ಬೇರೆ ಬೇರೆ ಕಾಲದಲ್ಲಿ ವೇಲಾಪುರ, ವೇಲೂರು ಮತ್ತು ಬೇಲಾಪುರವೆಂಬ ಹೆಸರುಗಳಿಂದ ಕರೆಯಲ್ಪಡುತ್ತಿತ್ತು. ಹೊಯ್ಸಳ ಶಿಲ್ಪಕಲೆಯ ಅತ್ಯಂತ ಸುಂದರ ಉದಾಹರಣೆಗಳಲ್ಲೊಂದಾದ ಚೆನ್ನಕೇಶವ ದೇವಸ್ಥಾನದಿಂದಾಗಿ ಈ ಪಟ್ಟಣವು ಪ್ರಸಿದ್ಧವಾಗಿದೆ. ಕ್ರಿ.ಶ.1116ರಲ್ಲಿ ಹೊಯ್ಸಳ ರಾಜ ವಿಷ್ಣುವರ್ಧನನು ಚೋಳರ ವಿರುದ್ಧ ಸಾಧಿಸಿದ ವಿಜಯದ ದ್ಯೋತಕವಾಗಿ ಈ ದೇಗುಲವನ್ನು ನಿರ್ಮಿಸಿ, ವಿಜಯ ನಾರಾಯಣ ಎಂದು ಕರೆದನು. ಹೋಯ್ಸಳ ವಂಶದ ವಿಷ್ಣುವರ್ಧನ ರಾಜನು ಪಂಚನಾರಾಯಣ ಪ್ರತಿಷ್ಠೆ ಅಂದರೆ ಬೇಲೂರು, ತಲಕಾಡು, ಮೇಲುಕೋಟೆ, ತೊಂಡನೂರು ಮತ್ತು ಗುಂಡ್ಲುಪೇಟೆ ಈ ಸ್ಥಳಗಳಲ್ಲಿ ಶ್ರೀ ನಾರಾಯಣ ದೇವಾಲಯಗಳನ್ನು ಕಟ್ಟಿಸಿ ದೇವರನ್ನು ಪ್ರತಿಷ್ಠೆ ಮಾಡಿದನೆಂದು ಪ್ರತೀತಿ ಇದೆ. ಚೆನ್ನಕೇಶವ /ವಿಜಯನಾರಾಯಣನ ಪ್ರತಿಮೆಯ ಎತ್ತರ 6 ಅಡಿ. 2 ಅಡಿ ಎತ್ತರದ ಪೀಠದಲ್ಲಿ ನಿಂತಿದ್ದು, ದಶಾವತಾರ ಚಿತ್ರಗಳಿಂದ ಕೂಡಿದ ಪ್ರಭಾವಳಿಯನ್ನು ಹೊಂದಿದೆ. ಹಿಂದಿನ ಕೈಗಳಲ್ಲಿ ಶಂಖ, ಚಕ್ರ, ಮುಂದಿನ ಕೈಗಳಲ್ಲಿ ಗದಾ, ಪದ್ಮ ವನ್ನು ಹಿಡಿದಿರುವನು.

ಚೆನ್ನಕೇಶವ ದೇವಸ್ಥಾನವು ಕಲ್ಲಿನಲ್ಲಿ ಮಾಡಬಹುದಾದ ಅತ್ಯಂತ ಸೂಕ್ಷ್ಮ ಕೆತ್ತನೆಗಳಿಗೆ ಕಲಾ ನೈಪುಣ್ಯತೆಗೆ ಉತ್ತಮ ಉದಾಹರಣೆಯಾಗಿದೆ. ಈ ದೇವಸ್ಥಾನದಲ್ಲಿ 80ಕ್ಕೂ ಹೆಚ್ಚು ಮದನಿಕೆಯರ ಶಿಲ್ಪಗಳು, ನಾಟ್ಯ, ಬೇಟೆ, ಮರಗಳ ಕೆಳಗೆ ನಿಂತಿರುವುದು, ಇತ್ಯಾದಿಗಳು ಇವೆ. ಕೆತ್ತನೆಯಿಂದ ಕೂಡಿರುವ ನವರಂಗದ ಕಂಬಗಳ ಮೇಲೆ ಕೆತ್ತಲಾಗಿರುವ 4 ಮದನಿಕಾ ವಿಗ್ರಹಗಳು (ಆಕರ್ಷಕವಾದ ಸೊಗಸಾದ ನಾಟ್ಯ ಭಂಗಿಗಳು) ಹೊಯ್ಸಳ ಶೈಲಿಯ ಅನುಪಮ ನಿರ್ಮಿತಿಗಳು. ಗರ್ಭಗೃಹವು ನಕ್ಷತ್ರಾಕಾರವಾಗಿದ್ದು, ಹಗಲಿನ ಬೇರೆ ಬೇರೆ ಹೊತ್ತಿನ ಗರ್ಭಗೃಹದ ಅಂಕುಡೊಂಕಾದ ಗೋಡೆಗಳ ಮೇಲೆ ಬಿದ್ದ ಬೆಳಕು ವಿಷ್ಣುವಿನ 24 ರೂಪಗಳನ್ನು ಬೇರೆ ಬೇರೆಯಾಗಿ ಕಾಣುವಂತೆ ಮಾಡುತ್ತದೆ. ಕಲ್ಯಾಣ ಚಾಲುಕ್ಯರ ಕಲಾಕೇಂದ್ರವಾದ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿಯಿಂದ ಬಂದ ತಂದೆ ಮತ್ತು ಮಗನಾದ ದಾಸೋಜ ಮತ್ತು ಚವನ ಎಂಬ ಕುಶಲಕಲಾಕಾರರಿಂದ ಈ ದೇವಸ್ಥಾನವು ಕಟ್ಟಲ್ಪಟ್ಟಿದೆ. ನವರಂಗದಲ್ಲಿರುವ ಶಿಲ್ಪಗಳ ಪೈಕಿ ದರ್ಪಣಸುಂದರಿ ಶಿಲ್ಪಕ್ಕೆ, ರಾಜ ವಿಷ್ಣುವರ್ಧನನ ಪತ್ನಿಯಾದ ಪರಮಸುಂದರಿ ಶಾಂತಲಾದೇವಿಯು ರೂಪದರ್ಶಿಯಾಗಿದ್ದಳು

ಎನ್ನಲಾಗುತ್ತದೆ. ಈ ಒಂದೇ ಕೆತ್ತನೆಯು ದೇವಸ್ಥಾನದ ಸೌಂದರ್ಯವನ್ನು ಹಾಗೂ ಭವ್ಯತೆಯನ್ನು ಎತ್ತಿ ತೋರಿಸುತ್ತದೆ. ಕಪ್ಪೆ ಚೆನ್ನಿಗರಾಯ, ಸೌಮ್ಯನಾಯಕಿ, ಆಂಡಾಳ್ ಮತ್ತು ಇನ್ನಿತರೆ ವೈಷ್ಣವ ಅಭಿವ್ಯಕ್ತಿಗಳು ಈ ದೇವಸ್ಥಾನವನ್ನು ಸುತ್ತುವರಿದಿವೆ. 13ನೇ ಶತಮಾನದ ಪ್ರಸಿದ್ಧ ಕನ್ನಡ ಕವಿ ರಾಘವಾಂಕನದು ಎಂದು ಹೇಳಲಾದ ಒಂದು ಸಮಾಧಿಯು ಬೇಲೂರಿನಲ್ಲಿ ಇದೆ.

ಯಜ್ಞ ಯಾಗಾದಿಗಳನ್ನು ಮಾಡಲು ಯಾಗಶಾಲೆ, ಅಡಿಗೆ ಮಾಡಲು ಪಾಕಶಾಲೆ, ಪುಷ್ಕರಣಿ, ದೀಪಾಲೆ ಕಂಬ, ಆನೆ ಬಾಗಿಲು ಮುಂತಾದವುಗಳು ಇತರ ಆಕರ್ಷಣೆಗಳು.

ದರ್ಶನ ಸಮಯ - ಬೆಳಿಗ್ಗೆ 7.30 ರಿಂದ 1.00 ಘಂಟೆ ಮತ್ತು ಮಧ್ಯಾಹ್ನ 2.30 ರಿಂದ ರಾತ್ರಿ 7.30 ಘಂಟೆಯವರೆಗೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಬೇಲೂರು ಪುರವರಾಧೀಶ್ವರ ಶ್ರೀ ಸೌಮ್ಯನಾಯಕಿ ದೇವೀ ಸಮೇತ ಶ್ರೀ ಚನ್ನಕೇಶವ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಅಚ್ಯುತಂ ಕೇಶವಂ ರಾಮ ನಾರಾಯಣಂ- ಕೃಷ್ಣ ದಾಮೋದರಂ
ವಾಸುದೇವಂ ಹರಿಂ | ಶ್ರೀಧರಂ ಮಾಧವಂ ಗೋಪಿಕಾ ವಲ್ಲಭಂ ಜಾನಕಿನಾಯಕಂ
ರಾಮಚಂದ್ರಂ ಭಜೆ ||

## 2. ಹೊಯ್ಸಳೇಶ್ವರ ದೇವಸ್ಥಾನ, ಹಳೇಬೀಡು

ಹಳೇಬೀಡು ಬೇಲೂರಿನಿಂದ 17 ಕಿ.ಮೀ. ಮತ್ತು ಹಾಸನದಿಂದ 30 ಕಿ.ಮೀ.ದೂರದಲ್ಲಿದೆ. ಯುನೆಸ್ಕೋ ವಿಶ್ವ ಪರಂಪರೆಯ ತಾಣವಾಗಿದೆ. ಹಳೇಬೀಡು ಹೊಯ್ಸಳೇಶ್ವರ ದೇವಸ್ಥಾನವನ್ನು ಮುಖ್ಯ ವಾಸ್ತುಶಿಲ್ಪಿ ಕೇತಮಾಲ 12 ನೇ ಶತಮಾನದಲ್ಲಿ ಹೊಯ್ಸಳ ರಾಜ ವಿಷ್ಣುವರ್ಧನ ಅವರ ಆದೇಶದ ಮೇರೆಗೆ ನಿರ್ಮಿಸಿದರು. ಹೊಯ್ಸಳೇಶ್ವರ ದೇವಸ್ಥಾನವನ್ನು ದ್ವಾರಸಮುದ್ರ ಎಂಬ ಮಾನವ ನಿರ್ಮಿತ ಸರೋವರದ ತೀರದಲ್ಲಿ ನಿರ್ಮಿಸಲಾಗಿದೆ. ದೆಹಲಿ ಸುಲ್ತಾನರ ಸೈನ್ಯದ ದಾಳಿಯಿಂದ ಹೊಯ್ಸಳೇಶ್ವರ ದೇವಸ್ಥಾನಕ್ಕೆ ಹಾನಿಯಾಯಿತು.

ಹೊಯ್ಸಳೇಶ್ವರ ದೇವಸ್ಥಾನವು ಹೊಯ್ಸಳ ಶೈಲಿಯ ವಾಸ್ತುಶಿಲ್ಪದಲ್ಲಿದೆ, ನಂದಿ (ಶಿವನ ಅಧಿಕೃತ ವಾಹನ) ಪ್ರತಿಮೆಯು ದೇವಾಲಯವನ್ನು ಹೊರಗಿನಿಂದ ಕಾವಲು ಕಾಯುತ್ತದೆ. ಒಳಾಂಗಣದಲ್ಲಿ ಹೂವುಗಳು ಮತ್ತು ಪ್ರಾಣಿಗಳ ಚಿತ್ರಗಳು, ಹಿಂದೂ ಮಹಾಕಾವ್ಯಗಳ ಕೆತ್ತನೆಗಳು ಮತ್ತು ಶಿಲಾ ಬಾಲಿಕೆಯರ ಕೆತ್ತನೆಯಿದೆ.

ಹೊಯ್ಸಳೇಶ್ವರ ಮತ್ತು ಶಾಂತಲೇಶ್ವರ ಅವಳಿ ದೇವಾಲಯಗಳ ಎದುರು ಅವಳಿ ನಂದಿಮಂಟಪಗಳಲ್ಲಿ ಸರ್ವಾಭರಣ ಭೂಷಿತ ನಂದಿ ವಿಗ್ರಹಗಳು ದೇವಾಲಯವನ್ನು ಹೊರಗಿನಿಂದ ಕಾವಲು ಕಾಯುತ್ತವೆ.

ಪ್ರೇಕ್ಷಣೀಯ ಸ್ಥಳಗಳು - ರಾಷ್ಟ್ರೀಯ ಸ್ಮಾರಕಗಳಾದ ಕೇದಾರೇಶ್ವರ ದೇವಾಲಯ, ಹುಲಿಕೆರೆ ಕಲ್ಯಾಣಿ (ಕೊಳ), ಜೈನ ಬಸದಿಗಳು, ನಗರೇಶ್ವರ ದೇವಾಲಯ ಸಂಕೀರ್ಣ, ಮತ್ತು ಮಲ್ಲಿಕಾರ್ಜುನ ದೇವಾಲಯ - ಧಾರ್ಮಿಕ ಕೇಂದ್ರ/ಮಠ, ದೋರಸಮುದ್ರ ಕೆರೆ.

ಸಮಯ - ಹಳೇಬೀಡು ದೇವಾಲಯ ಸಂಕೀರ್ಣವು ಬೆಳಿಗ್ಗೆ 6.30 ರಿಂದ ರಾತ್ರಿ 9 ರವರೆಗೆ ತೆರೆದಿರುತ್ತದೆ.

## 3. ಶ್ರವಣಬೆಳಗೊಳ

ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ಸುಮಾರು 150 ಕಿ.ಮೀ ದೂರದಲ್ಲಿ ಪಶ್ಚಿಮೋತ್ತರಕ್ಕೆ ಶ್ರವಣಬೆಳಗೊಳವಿದೆ. ಈ ಪಟ್ಟಣವು ಸುಮಾರು 2 ಸಹಸ್ರ ವರ್ಷಗಳಿಗೂ ಮೇಲ್ಪಟ್ಟು ಜೈನರ ಕಲೆ, ವಾಸ್ತುಶಿಲ್ಪ, ಧರ್ಮ, ಮತ್ತು ಸಂಸ್ಕೃತಿ ಇವುಗಳ ಪ್ರಮುಖ ಕೇಂದ್ರವಾಗಿದೆ. ಸುಮಾರು 2 ಸಹಸ್ರ ವರ್ಷಗಳ ಹಿಂದೆ ಜೈನರ ಮಹಾನ್ ಆಚಾರ್ಯರುಗಳಲ್ಲಿ ಅತ್ಯಂತ ಪೂರ್ವಿಕರಾದ ಭಗವಾನ್ ಭದ್ರಬಾಹು ಮುನಿಗಳು ಮಧ್ಯಪ್ರದೇಶದ ಉಜ್ಜಯಿನಿಯಿಂದ ಶ್ರವಣಬೆಳಗೊಳಕ್ಕೆ ತಮ್ಮ ಶಿಷ್ಯರೊಂದಿಗೆ ಬಂದರು. ಈ ತಪಸ್ವಿಯಿಂದ ಪ್ರಭಾವಿತನಾದ ಭಾರತದ ಬಹುಭಾಗಗಳನ್ನು ಆಳಿದ ಚಕ್ರವರ್ತಿ ಚಂದ್ರಗುಪ್ತ ಮೌರ್ಯನು ತನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ಈ ಭಾಗದಲ್ಲಿ ನೆಲೆಸಿದನು.

ಗೊಮ್ಮಟೇಶ್ವರಸ್ವಾಮಿಯ ಏಕಶಿಲಾವಿಗ್ರಹ - ಎರಡು ಬೆಟ್ಟಗಳಲ್ಲೊಂದಾದ ಇಂದ್ರಗಿರಿಯ ಮೇಲೆ 18 ಮೀಟರ್ ಎತ್ತರದ ಜೈನ ತಪಸ್ವಿಯಾದ ಗೊಮ್ಮಟೇಶ್ವರಸ್ವಾಮಿಯ ಏಕಶಿಲಾವಿಗ್ರಹವು ಶತಮಾನಗಳಿಂದಲೂ ಪೂಜಾ ಮಾಧ್ಯಮವಾಗಿ ನಿಂತಿದೆ. ಮತ್ತು ಇದು ಪ್ರಪಂಚದಲ್ಲೇ ಇದು ಅತಿ ಎತ್ತರದ ಹಾಗೂ ಅತ್ಯಂತ ಸುಂದರವಾದ ಏಕಶಿಲಾವಿಗ್ರಹಗಳಲ್ಲೊಂದು ಎಂದು ಹೇಳಲಾಗುತ್ತದೆ. ಗಂಗ ಸಾಮ್ರಾಜ್ಯದ ಪ್ರಧಾನಾಮಾತ್ಯನಾದ ಮತ್ತು ಮುಖ್ಯ ಸೇನಾನಿಯಾದ ಚಾವುಂಡರಾಯನು ಕ್ರಿ.ಶ. 981 ರಲ್ಲಿ ಧ್ಯಾನನಿರತನಾದ ಬಾಹುಬಲಿಯ ಮೂರ್ತಿಯನ್ನು ನಿರ್ಮಿಸಿದನು.

ಇಂದ್ರಗಿರಿಯ ಎದುರಿಗೇ ಸ್ವಲ್ಪ ಚಿಕ್ಕದಾದ ಚಂದ್ರಗಿರಿ ಬೆಟ್ಟವು ಇದ್ದು, ಅಲ್ಲಿ ಕೆಲವು ಜೈನ ದೇವಸ್ಥಾನಗಳು ಮತ್ತು ಜೈನ ಧರ್ಮದ ಪ್ರಸಿದ್ಧ ಪೋಷಕನಾದ ಚಂದ್ರಗುಪ್ತ ಮೌರ್ಯನ ಸಮಾಧಿ ಇವುಗಳನ್ನು ಕಾಣಬಹುದು.

ಹತ್ತಿರದ ಆಕರ್ಷಣೆ - ಮೆಲುಕೋಟೆ (35 ಕಿ.ಮೀ),

ಸಮಯ - ಶ್ರವಣಬೆಳಗೊಳ ದೇವಾಲಯದ ಸಮಯ ಬೆಳಿಗ್ಗೆ 6.30 ರಿಂದ 11.30 ಮತ್ತು ಸಂಜೆ 3.30 ರಿಂದ 6.30 ರ ತನಕ ಭಕ್ತಾದಿಗಳಿಗೆ ತೆರೆದಿರುತ್ತದೆ. ಶ್ರವಣಬೆಳಗೊಳದ ಬೆಟ್ಟಗಳನ್ನು (615 ಮೆಟ್ಟಿಲುಗಳು) ಹತ್ತಿ ಇಳಿಯಲು, ದೇಗುಲಗಳನ್ನು ವೀಕ್ಷಿಸಲು ಕನಿಷ್ಠ ಅರ್ಧ ದಿನ ಬೇಕಾಗುತ್ತದೆ.

ಮಹಾಮಸ್ತಕಾಭಿಷೇಕ - ಮಹಾಮಸ್ತಕಾಭಿಷೇಕ ಉತ್ಸವವು, ಹನ್ನೆರಡು ವರ್ಷಗಳಿಗೊಮ್ಮೆ ಜರುಗುವ ಒಂದು ಸುದೀರ್ಘವಾದ ಆಚರಣೆಯಾಗಿದೆ. ನೂರಾರು ಕೊಡಗಳಲ್ಲಿ ಎಳನೀರು, ಅರಿಶಿನದ ಮುದ್ದೆ, ಕುಂಕುಮ, ಕಬ್ಬಿನ ಹಾಲು, ಹಾಲು, ಅಕ್ಕಿಹಿಟ್ಟು, ಮೂಲಿಕೆಗಳಿಂದ ಮಾಡಿದ ಕಷಾಯ, ಶ್ರೀಗಂಧ, ಚಂದನ, ಅಷ್ಟಗಂಧ, ಕೇಸರಿ, ಬಂಗಾರ ಮತ್ತು ಬೆಳ್ಳಿಯ ಹೂವುಗಳು ಮತ್ತು ಬೆಲೆಬಾಳುವ ಹರಳುಗಳನ್ನು ಮೂರ್ತಿಯ ಮೇಲಿನಿಂದ ಅಭಿಷೇಕ ಮಾಡಲು ಅರ್ಚಕರುಗಳು ಮೇಲೆ ಹತ್ತುತ್ತಾರೆ. ಹೆಲಿಕಾಪ್ಟರ್ ನಿಂದ ಹೂಮಳೆಗರೆಯುವುದು ಈ ಕಾರ್ಯಕ್ರಮದ ಅದ್ಭುತವಾದ ಅಂತಿಮ ಚರಣ.

## 4. ರಾಮನಾಥಪುರ ದೇವಾಲಯಗಳ ಪಟ್ಟಣ

ರಾಮನಾಥಪುರ, ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ಪ್ರಮುಖ ಹೋಬಳಿ ಕೇಂದ್ರ. ಈ ಸ್ಥಳ ಪವಿತ್ರ ಕಾವೇರಿ ನದಿಯ ಎಡ ದಂಡೆಯ ಮೇಲಿದ್ದು, ಕರ್ನಾಟಕ ರಾಜ್ಯದ ಒಂದು ಪ್ರಮುಖ ಯಾತ್ರಾ ಮತ್ತು ಪ್ರವಾಸಿ ತಾಣವಾಗಿ ಹೆಸರುವಾಸಿಯಾಗಿದೆ. ರಾಮನಾಥಪುರ ಶತ-ಶತಮಾನಗಳಿಂದ ಪವಿತ್ರ ಸ್ಥಳವಾಗಿ ಗುರುತಿಸಿಕೊಂಡಿದ್ದು "ದಕ್ಷಿಣ ಕಾಶಿ" ಎಂದು ಪ್ರಖ್ಯಾತಿ ಹೊಂದಿದೆ. ತ್ರೇತಾಯುಗದ ಶ್ರೀರಾಮಚಂದ್ರನು ಈಶ್ವರನ ಲಿಂಗವನ್ನು ಪೂಜಿಸಿದ ಸ್ಥಳವೆಂಬ ಕಾರಣದಿಂದ ಈ ಗ್ರಾಮಕ್ಕೆ "ರಾಮನಾಥಪುರ" ಎಂಬ ಹೆಸರು ಬಂದಿದೆ ಎಂದು ಪ್ರತೀತಿಯಿದೆ. ಈ ಗ್ರಾಮದಲ್ಲಿ ಹಲವಾರು ದೇವಾಲಯಗಳಿರುವುದರಿಂದ "ದೇವಾಲಯಗಳ ಪಟ್ಟಣ" ಎಂದೂ ಸಹ ಪ್ರಸಿದ್ಧವಾಗಿದೆ. ರಾಮನಾಥಪುರದಲ್ಲಿರುವ ಹೆಸರುವಾಸಿಯಾಗಿರುವ ದೇವಾಲಯಗಳೆಂದರೆ ಪ್ರಸನ್ನ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಾಲಯ, ಚತುರ್ಯುಗ ಶ್ರೀ ರಾಮೇಶ್ವರ ದೇವಾಲಯ, ಶ್ರೀ ಪಟ್ಟಾಭಿರಾಮ ಸ್ವಾಮಿ ದೇವಾಲಯ, ಶ್ರೀ ಅಗಸ್ತ್ಯೇಶ್ವರ ಸ್ವಾಮಿ ದೇವಾಲಯ, ಶ್ರೀ ರಾಘವೇಂದ್ರ ಸ್ವಾಮಿ ಮಠ ಮುಂತಾದವುಗಳು.

ಕಾವೇರಿ ನದಿಯಲ್ಲಿ ಪವಿತ್ರ ಸ್ನಾನವನ್ನು ಮಾಡಿ, ಶ್ರೀ ಸುಬ್ರಹ್ಮಣ್ಯ ಸ್ವಾಮಿಯ ಸೇವೆಯನ್ನು ಭಕ್ತಿಯಿಂದ ಮಾಡಿದರೆ, ಅವರ ಜನ್ಮಜನ್ಮಾಂತರದ ಪಾಪ-ಕರ್ಮಗಳೆಲ್ಲವೂ ಕರಗಿ ಹೋಗುವುದೆಂಬ ನಂಬಿಕೆಯಿದೆ. ಪ್ರತಿದಿನ ನೂರಾರು ಭಕ್ತಾದಿಗಳು, ಯಾತ್ರಾತ್ರಿಗಳು ಮತ್ತು ಪ್ರವಾಸಿಗರು ತಮ್ಮ ಹರಕೆ ಮತ್ತು ಮನಸ್ಸಿನ ಅಭೀಷ್ಟಗಳನ್ನು ಭಗವಂತನ ಪೂಜಾ-ಕೈಂಕರ್ಯದ ಮೂಲಕ ಈಡೇರಿಸಿಕೊಳ್ಳಲು ದೇವಾಲಯಕ್ಕೆ ಭೇಟಿ ನೀಡುತ್ತಾರೆ. ಪ್ರತಿ ವರ್ಷ ಡಿಸೆಂಬರ್-ಜನವರಿ ತಿಂಗಳಿನಲ್ಲಿ ನಡೆಯುವ ಜಾತ್ರಾ ಮಹೋತ್ಸವದ ಸಂದರ್ಭದಲ್ಲಿ ಸಾವಿರಾರು ಭಕ್ತಾದಿಗಳು ಸ್ವಾಮಿಯ ದರ್ಶನಕ್ಕೆ ಭೇಟಿ ನೀಡುತ್ತಾರೆ.

ರಾಮನಾಥಪುರ ಪಟ್ಟಣದಲ್ಲಿರುವ ಪ್ರವಾಸಿ ತಾಣಗಳು - ಪ್ರಸನ್ನ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಾಲಯ, ಶ್ರೀ ಹೊಸಳಿಗಮ್ಮ ದೇವಾಲಯ, ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯ, ಶ್ರೀ ಚತುರ್ಯುಗ ರಾಮೇಶ್ವರಸ್ವಾಮಿ ದೇವಾಲಯ, ಶ್ರೀ ಲಕ್ಷ್ಮಣೇಶ್ವರಸ್ವಾಮಿ ದೇವಾಲಯ, ಶ್ರೀ ಅಗಸ್ತ್ಯೇಶ್ವರಸ್ವಾಮಿ ದೇವಾಲಯ, ಶ್ರೀ ಪಟ್ಟಾಭಿರಾಮಸ್ವಾಮಿ ದೇವಾಲಯ, ಪವಿತ್ರ ಕಾವೇರಿ ನದಿ, ವಹ್ನಿ ಪುಷ್ಕರಣಿ (ಮತ್ಸ್ಯ ಕೊಳ), ಗೋಗರ್ಭ ಶಿಲೆ.

ರಾಮನಾಥಪುರ ಸುತ್ತಮುತ್ತ - ಕೊಣನೂರು ತೂಗು ಸೇತುವೆ, ಕಟ್ಟೆಪುರ ಅಣೆಕಟ್ಟು, ಸಂಗೀತ ಭವನ/ಗೋಪುರ, ರುದ್ರಪಟ್ಟಣ,

## 5. ಹಾಸನ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಯೋಗ ನರಸಿಂಹ ದೇವಸ್ಥಾನ, ಗೊರೂರು, ಅರಕಲಗೂಡು ತಾಲ್ಲೂಕು
2. ಶ್ರೀ ಹಾಸನಾಂಬ ದೇವಸ್ಥಾನ, ಹಾಸನ ಪಟ್ಟಣ
3. ಶ್ರೀ ಲಕ್ಷ್ಮೀದೇವಿ ದೇವಸ್ಥಾನ ದೊಡ್ಡಗದ್ದವಳ್ಳಿ, ಹಾಸನ ತಾಲ್ಲೂಕು
4. ಶ್ರೀ ಬುಚೇಶ್ವರ ದೇವಸ್ಥಾನ ಕೋರವಂಗಲ, ಹಾಸನ ತಾಲ್ಲೂಕು
5. ಶ್ರೀ ನಗರೇಶ್ವರ, ಶ್ರೀ ಚನ್ನಕೇಶವ ದೇವಾಲಯಗಳು ಮೊಸಲೆ, ಹಾಸನ ತಾಲ್ಲೂಕು
6. ಶ್ರೀ ಚೆನ್ನಕೇಶವ ದೇವಸ್ಥಾನ, ಹಾರನಹಳ್ಳಿ, ಹಾಸನ ತಾಲ್ಲೂಕು
7. ಶ್ರೀ ವೆಂಕಟರಮಣ ಸ್ವಾಮಿ ದೇವಸ್ಥಾನ, ಮಾಲೆಕಲ್ ತಿರುಪತಿ, ಅರಸೀಕೆರೆ ತಾಲ್ಲೂಕು
8. ಈಶ್ವರ ದೇವಸ್ಥಾನ, ಅರಸಿಕೇರೆ ಪಟ್ಟಣ, ಅರಸೀಕೆರೆ ತಾಲ್ಲೂಕು
9. ಜೆನುಕಲ್ಲು ಸಿದ್ದೇಶ್ವರ ದೇವಸ್ಥಾನ ಯಾದಪುರ, ಅರಸೀಕೆರೆ ತಾಲ್ಲೂಕು
10. ಶ್ರೀ ರಂಗನಾಥಸ್ವಾಮಿ ದೇವಸ್ಥಾನ, ಬಿಳಿಕಲ್, ಅರಸೀಕೆರೆ ತಾಲ್ಲೂಕು
11. ಶ್ರೀ ಚೆನ್ನಕೇಶವ ದೇವಸ್ಥಾನ, ಅರಕೆರೆ, ಅರಸೀಕೆರೆ ತಾಲ್ಲೂಕು
12. ಶ್ರೀ ಚೆನ್ನಕೇಶವ ದೇವಸ್ಥಾನ, ಹುಲ್ಲಕೆರೆ, ಅರಸೀಕೆರೆ ತಾಲ್ಲೂಕು
13. ಶ್ರೀ ಲಕ್ಷ್ಮಿ ನರಸಿಂಹ ಸ್ವಾಮಿ ದೇವಸ್ಥಾನ, ಜಾವಗಲ್ಲು ಅರಸೀಕೆರೆ ತಾಲ್ಲೂಕು
14. ಶ್ರೀ ಲಕ್ಷ್ಮಿ ದೇವಸ್ಥಾನ, ಮಳಲಿ, ಹೊಳೆನರಸೀಪುರ ತಾಲ್ಲೂಕು
15. ಶ್ರೀ ಬೆಟ್ಟದ ರಂಗನಾಥಸ್ವಾಮಿ ದೇವಾಲಯ (ಹಳೇಕೋಟೆ), ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿ ದೇವಾಲಯ, ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ (ಟೌನ್ ಕೋಟೆ), ಮಾವಿನಕೆರೆ, ಹೊಳೆನರಸೀಪುರ ತಾಲ್ಲೂಕು
16. ಶ್ರೀ ನಾಗೇಶ್ವರ ದೇವಸ್ಥಾನ, ನವಿಲೆ, ಚನ್ನರಾಯಪಟ್ಟಣ ತಾಲ್ಲೂಕು
17. ಶ್ರೀ ಲಕ್ಷ್ಮಿ ನರಸಿಂಹ, ಶ್ರೀ ಸದಾಶಿವ ದೇವಾಲಯಗಳು ನುಗ್ಗೆಹಳ್ಳಿ ಚನ್ನರಾಯಪಟ್ಟಣ

18. ಶ್ರೀ ಚೆನ್ನಕೇಶವ ದೇವಸ್ಥಾನ, ಅನೆಕೆರೆ, ಚನ್ನರಾಯಪಟ್ಟಣ ತಾಲ್ಲೂಕು

19. ಶ್ರೀ ಚೆನ್ನಕೇಶವ ದೇವಸ್ಥಾನ, ಚನ್ನರಾಯಪಟ್ಟಣ, ಚನ್ನರಾಯಪಟ್ಟಣ ತಾಲ್ಲೂಕು

20. ಶ್ರೀ ವೀರನಾರಾಯಣ (ತ್ರಿಕುಟಾಚಲ) ಬೆಳವಾಡಿ, ಬೇಲೂರು ತಾಲ್ಲೂಕು

# 5. ಕೊಡಗು ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಕೊಡಗು ಒಂದು ದಕ್ಷಿಣಒಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ದಕ್ಷಿಣಕನ್ನಡ, ಹಾಸನ ಮತ್ತು ಮೈಸೂರು ಜಿಲ್ಲೆಗಳು ಹಾಗೂ ಕೇರಳ ಸುತ್ತುವರಿದಿವೆ. ಮಡಿಕೇರಿ ಪಟ್ಟಣವು ಜಿಲ್ಲಾ ಕೇಂದ್ರ. ಮಡಿಕೇರಿ, ಸೋಮವಾರಪೇಟೆ, ವಿರಾಜಪೇಟೆ ಎಂಬ 3 ತಾಲ್ಲೂಕುಗಳನ್ನು ಹೊಂದಿದೆ.

ಕೊಡಗನ್ನು ಭಾರತದ ಸ್ಕಾಟ್ಲೆಂಡ್ ಎಂದು ಕರೆಯಲಾಗುತ್ತದೆ. ಕೊಡವ ಭಾಷೆ ಮಾತನಾಡುವ ಸ್ಥಳೀಯರನ್ನು ಕೊಡವರು ಎಂದು ಕರೆಯಲಾಗುತ್ತದೆ. ಉಳಿದ ಭಾಗಗಳಿಗಿಂತ ವಿಭಿನ್ನವಾದ ವೇಷ ಭೂಷಣಗಳನ್ನು ಧರಿಸುವ ಇವರು ಭಾರತದ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿದ ಹಿರಿಮೆ ಹೊಂದಿದ್ದಾರೆ. ಕೊಡಗಿನಲ್ಲಿ ಕಾಫಿ, ಕಾಳು ಮೆಣಸು, ಕಿತ್ತಳೆ ಮತ್ತು ಜೇನುತುಪ್ಪ ಹೆಚ್ಚು ಜನಪ್ರಿಯ ಉತ್ಪನ್ನಗಳಾಗಿವೆ.

ಜಿಲ್ಲೆಯ ಮುಖ್ಯ ನದಿಗಳಲ್ಲಿ ಪೂರ್ವಕ್ಕೆ ಹರಿಯುವ ಕಾವೇರಿ ಮತ್ತು ಪಶ್ಚಿಮಕ್ಕೆ ಹರಿಯುವ ನೇತ್ರಾವತಿ, ಪಯಸ್ವಿನಿ, ಅರಿಯಕೋಡವು, ಕುಪ್ಪಂ ಮತ್ತು ವೇಲಪಟ್ಟಣಂ ಹೆಸರಿಸಬಹುದು.

ಸಾರಿಗೆ ವ್ಯವಸ್ಥೆ - ಈ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿಗಳಾದ 275, ಮತ್ತು ರಾಜ್ಯ ಹೆದ್ದಾರಿಗಳು ಉತ್ತಮ ಸಾರಿಗೆ ಕಲ್ಪಿಸಿವೆ. ಸರಕಾರಿ ಬಸ್ ಸೌಲಭ್ಯ ಉತ್ತಮವಾಗಿದೆ.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಮಡಿಕೇರಿ, ರಾಜಾ ಸೀಟ್ ಉದ್ಯಾನ ಮತ್ತು ಸಂಗೀತ ಕಾರಂಜಿ, ನಾಲ್ಕುನಾಡು ಅರಮನೆ, ದುಬಾರೆ ಆನೆ ಶಿಬಿರ, ನಾಗರಹೊಳೆ ಅರಣ್ಯ ಸಫಾರಿ, ನಿಶಾನಿ ಬೆಟ್ಟ ಚಾರಣ, ಬ್ರಹ್ಮಗಿರಿ ಚಾರಣ, ಕಾವೇರಿ ನಿಸರ್ಗ ಧಾಮ, ಹೊನ್ನಮ್ಮನಕೆರೆ ಸರೋವರ, ಅಬ್ಬಿ ಜಲಪಾತ, ಇರುಪ್ಪು ಜಲಪಾತ, ಚೆಲವಾರ ಜಲಪಾತ, ಹಾರಂಗಿ ಅಣೆಕಟ್ಟು, ಚಿಕ್ಲಿಹೊಳೆ ಅಣೆಕಟ್ಟು, ಮುಂತಾದವು ಕೊಡಗು ಜಿಲ್ಲೆಯ ಪ್ರವಾಸೀ ಆಕರ್ಷಣೆಗಳು.

ದಕ್ಷಿಣ ಕರ್ನಾಟಕದ ಅಡುಗೆಗಳನ್ನು ಸವಿಯಬಹುದು.

## 1. ಭಗಂಡೇಶ್ವರ - ತಲಕಾವೇರಿ ದೇವಸ್ಥಾನ ಭಾಗಮಂಡಲ

ಭಾಗಮಂಡಲವು ಮಡಿಕೇರಿ ಜಿಲ್ಲಾ ಕೇಂದ್ರದಿಂದ 33 ಕಿ.ಮೀ ದೂರವಿದ್ದು ವಿರಾಜಪೇಟೆ ಹಾಗೂ ಸುತ್ತಮುತ್ತಲಿನ ಪ್ರದೇಶಗಳೊಂದಿಗೆ ಉತ್ತಮ ರಸ್ತೆಯ ಸಂಪರ್ಕವನ್ನು ಹೊಂದಿದೆ. ಈ ಸ್ಥಳವು ಕಾವೇರಿ, ಕನ್ನಿಕೆ ಹಾಗೂ ಗುಪ್ತನದಿಯಾದ ಸುಜ್ಯೋತಿ ನದಿಗಳ ಸಂಗಮ. ಭಾಗಮಂಡಲವು ತ್ರಿವೇಣಿ ಸಂಗಮ ಕ್ಷೇತ್ರವಾಗಿರುವುದರಿಂದ ಇಲ್ಲಿಗೆ ಭೇಟಿ ನೀಡುವ ಸಾಕಷ್ಟು ಜನ ಭಕ್ತಾದಿಗಳು ಸಂಗಮದಲ್ಲಿ ಪವಿತ್ರಸ್ನಾನ ಮತ್ತು ತಮ್ಮ

ಹಿರಿಯರ/ಪೂರ್ವಜರಿಗೆ ಸಂಬಂಧಿಸಿದಂತೆ ಕರ್ಮಾಚರಣೆಗಳನ್ನು ಸಾಮಾನ್ಯವಾಗಿ ನಿರ್ವಹಿಸುತ್ತಾರೆ.

ಭಗಂಡೇಶ್ವರ ದೇವಾಲಯ ಶಿವನಿಗೆ ಮುಡಿಪಾದ ಪ್ರಮುಖ ಧಾರ್ಮಿಕ ತಾಣ. ಈ ದೇವಾಲಯದಲ್ಲಿ ಸುಬ್ರಹ್ಮಣ್ಯ, ಗಣಪತಿ ಹಾಗೂ ವಿಷ್ಣುವಿನ ವಿಗ್ರಹಗಳೂ ಸಹ ಪ್ರತಿಷ್ಠಾಪಿಸಲ್ಪಟ್ಟಿವೆ.

ದರ್ಶನ ಸಮಯ : ಬೆಳಿಗ್ಗೆ 6:30 ರಿಂದ 1:30 ಮತ್ತು ಸಂಜೆ 3:00 ರಿಂದ 8:30 ರ ವರೆಗೆ

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಭಾಗಮಂಡಲ ಪುರವರಾಧೀಶ್ವರ ಶ್ರೀ ಮಹೇಶ್ವರಿ ದೇವೀ ಸಮೇತ ಶ್ರೀ ಭಗಂಡೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಬ್ರಹ್ಮ ಮುರಾರಿ ಸುರಾರ್ಚಿತ ಲಿಂಗಂ ನಿರ್ಮಲಭಾಸಿತ ಶೊಭಿತ ಲಿಂಗಂ | ಜನ್ಮಜದುಃಖ ವಿನಾಶಕ ಲಿಂಗಂ ತತ್ಪ್ರಣಮಾಮಿ ಸದಾ ಶಿವಲಿಂಗಂ ||

ಉತ್ಸವಗಳು - ಮಹಾಶಿವರಾತ್ರಿ ಉತ್ಸವ, ವಾರ್ಷಿಕೋತ್ಸವ

ತಲಕಾವೇರಿ - ದಕ್ಷಿಣಭಾರತದಲ್ಲಿ ಹರಿಯುವ ಕಾವೇರಿ ನದಿಯ ಉಗಮ ಸ್ಥಾನ. ಕರ್ನಾಟಕ ರಾಜ್ಯದಲ್ಲಿರುವ ಕೊಡುಗೆ ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಭಾಗಮಂಡಲ ಹೋಬಳಿಯಲ್ಲಿ ಭಾಗಮಂಡಲದ ಪಶ್ಚಿಮಕ್ಕೆ, ಪಶ್ಚಿಮ ಘಟ್ಟಗಳಲ್ಲಿರುವ ಬ್ರಹ್ಮಗಿರಿಯ ಇಳಿಜಾರಿನಲ್ಲಿ ಇದೆ. ಮಡಿಕೇರಿಯಿಂದ 33 ಕಿಮೀ, ದೂರದಲ್ಲಿರುವ ಭಾಗಮಂಡಲಕ್ಕೂ ತಲಕಾವೇರಿಗೂ 8 ಕಿಮೀ. ಉದ್ದದ ವಾಹನಯೋಗ್ಯ ರಸ್ತೆಯಿದೆ.

ಕಾವೇರಿಯ ಉಗಮಸ್ಥಾನ 2' x 2' ಯ ಒಂದು ಪುಟ್ಟ ಕೊಳ. ಇದನ್ನು ಕುಂಡಿಗೆ ಎನ್ನುತ್ತಾರೆ. ಇದರ ಪಕ್ಕದಲ್ಲಿ ಉತ್ತರಕ್ಕೆ 4' ಎತ್ತರದ ಒಂದು ಮಂಟಪವಿದೆ. ಕುಂಡಿಗೆಯ ಮುಂದೆ ಒಂದು ಸಣ್ಣ ಕೊಳವಿದೆ. ಕುಂಡಿಗೆಯಿಂದ ಹೊರಟ ನೀರು ಸಣ್ಣ ಕೊಳ ಸೇರಿ ಅಂತರ್ಗಾಮಿಯಾಗಿ ಹರಿದು ಇನ್ನೊಂದು ಕೊಳವನ್ನು ತುಂಬುತ್ತದೆ. ಪುನಃ ನೀರು ಅಂತರ್ಗಾಮಿಯಾಗಿ ಹರಿದು ಕಣಿವೆಯಲ್ಲಿ ಕಾಣಿಸಿಕೊಂಡು ಮುಂದೆ ಹರಿಯುತ್ತದೆ. ಕುಂಡಿಗೆಯಲ್ಲಿ ಕಾವೇರಿ ತೀರ್ಥ ಉದ್ಭವವಾಗುವುದೆಂದು ನಂಬಿಕೆಯಿದೆ. ಪ್ರತಿವರ್ಷ ತುಲಾ ಸಂಕ್ರಮಣದಂದು ಬೆಳಗಿನ ನಿಶ್ಚಿತ ಮುಹೂರ್ತದಲ್ಲಿ ಆ ಕುಂಡಿಗೆಯಿಂದ ನೀರು ಉಕ್ಕಿ ಹರಿಯುತ್ತದೆ. ಆ ಸಮಯಕ್ಕೆ ದೇಶದ ಅನೇಕ ಕಡೆಗಳಿಂದ ಹಿಂದೂ ಯಾತ್ರಾರ್ಥಿಗಳು ಇಲ್ಲಿಗೆ ಬರುತ್ತಾರೆ. ಇಲ್ಲಿ ಸ್ನಾನಮಾಡುತ್ತಾರೆ. ತುಲಾ ಸಂಕ್ರಮಣದಿಂದ ವೃಶ್ಚಿಕ ಸಂಕ್ರಮಣದ ವರೆಗೆ

ತಲಕಾವೇರಿಯ ಬಳಿ ಜಾತ್ರೆ ನಡೆಯುತ್ತದೆ. ಇಲ್ಲಿ ಯಾತ್ರಿಕರಿಗೆ ಇಳಿದುಕೊಳ್ಳಲು ವಸತಿಗಳುಂಟು. ಇಲ್ಲಿಂದ ಸು. 300 ಅಡಿ ಎತ್ತರದ ಬ್ರಹ್ಮಗಿರಿಯ ನೆತ್ತಿಯ ಮೇಲೆ ಸಪ್ತಋಷಿಗಳು ಹೋಮ ಮಾಡಿದರೆಂದು ಹೇಳಲಾದ ಏಳು ಸಣ್ಣ ಗುಂಡಿಗಳಿವೆ. ಆಕಾಶ ಶುಭ್ರವಾಗಿರುವಾಗ ಬ್ರಹ್ಮಗಿರಿಯ ತುದಿಯಿಂದ ಬೆಟ್ಟದಪುರದ ಬೆಟ್ಟವೂ ನೀಲಗಿರಿಯೂ ಉತ್ತರದ ಕುದುರೆಮುಖ ಶಿಖರಗಳೂ ಪಶ್ಚಿಮದಲ್ಲಿ ಘಟ್ಟದ ಕೆಳಗಿನ ಕರಾವಳಿಯಲ್ಲಿ ಹಾವುಗಳಂತೆ ಹರಿಯುವ ನದಿಗಳೂ ಅವುಗಳಿಂದಾಚೆಗೆ ಅರಬ್ಬಿ ಸಮುದ್ರವೂ ಕಾಣುತ್ತವೆ.

ಭಾಗಮಂಡಲದಿಂದ ಸ್ವಲ್ಪವೆ ದೂರದಲ್ಲಿರುವ ಕಕ್ಕಾಬೆ ಎಂಬಲ್ಲಿ ಪಾಡಿ ಎಂಬ ಸ್ಥಳವಿದ್ದು ಅಲ್ಲಿ ಇಗ್ಗುತಪ್ಪನ ದೇವಾಲಯವಿದೆ. ಇಗ್ಗುತಪ್ಪ ದೇವರು ಕೊಡವರ ಪ್ರಮುಖ ದೇವನಾಗಿದ್ದು ಈ ದೇವಾಲಯ ತಾಣವು ಕೊಡವರಿಂದ ಅವರ ತಾಯಿನಾಡಿನಲ್ಲಿರುವ ಅತಿ ಪವಿತ್ರ ದೇವಾಲಯವಾಗಿ ಪರಿಗಣಿಸಲ್ಪಟ್ಟಿದೆ. ಕೊಡವರು ಇಗ್ಗುತಪ್ಪನನ್ನು ಮಹಾಗುರು ಹಾಗೂ ಮಳೆಯ ದೇವರು ಎಂದು ನಂಬುತ್ತಾರೆ.

ದರ್ಶನ ಸಮಯ - ಬೆಳಿಗ್ಗೆ 6:00 ರಿಂದ ಸಂಜೆ 6:00

ಉತ್ಸವಗಳು - ತಲಕಾವೇರಿ ವಾರ್ಷಿಕೋತ್ಸವ, ತಲಕಾವೇರಿ ತುಲಾ ಸಂಕ್ರಮಣ ಜಾತ್ರೆ ತೀರ್ಥೋದ್ಭವ, ಶ್ರೀ ಸುಬ್ರಹ್ಮಣ್ಯ ಷಷ್ಠಿ ಉತ್ಸವ / ಹುತ್ತರಿ

ಪ್ರೇಕ್ಷಣೀಯ ಸ್ಥಳಗಳು - ಬ್ರಹ್ಮಗಿರಿ ಶಿಖರ, ತಲಕಾವೇರಿ ವನ್ಯಜೀವಿಗಳ ಅಭಯಾರಣ್ಯ, ಬೈಲಕುಪ್ಪೆ, ಕಾವೇರಿ ನಿಸರ್ಗಧಾಮ, ದುಬಾರೆ ಆನೆ ಶಿಬಿರ

## 2. ಓಂಕಾರೇಶ್ವರ ದೇವಸ್ಥಾನ ಮಡಿಕೇರಿ

ಕೊಡಗು ಜಿಲ್ಲೆ, ಮಡಿಕೇರಿ ನಗರದಲ್ಲಿರುವ ಶ್ರೀ ಓಂಕಾರೇಶ್ವರ ದೇವಾಲಯವು ಬ್ರಹ್ಮಹತ್ಯಾ ದೋಷ ನಿವೃತ್ತಿಗಾಗಿ ಎರಡನೇ ಲಿಂಗರಾಜೇಂದ್ರ ದೊರೆಯಿಂದ ಶಾಲಿವಾಹನ ಶಕ 1741ನೇ ಇಸವಿಯಲ್ಲಿ ನಿರ್ಮಿಸಲ್ಪಟ್ಟಿದೆ. ಮೊಘಲ್ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿರುವ ಈ ದೇವಾಲಯ ಇಂಡೋ ಇಸ್ಲಾಮಿಕ್, ಗಾಥಿಕ್ ವಾಸ್ತುವಿನ್ಯಾಸಗಳನ್ನು ಒಳಗೊಂಡಿದೆ. ಇಂತಹ ವಾಸ್ತುಶಿಲ್ಪವಿರುವ ಮತ್ತೊಂದು ಶಿವ ದೇವಾಲಯ ಭಾರತದಲ್ಲಿ ಕಾಣ ಸಿಗುವುದೇ ಅಪರೂಪ. ಅಂತೆಯೇ ಓಂಕಾರೇಶ್ವರ ಎಂಬ ಹೆಸರಿನ ಶಿವಲಿಂಗಗಳು ಭಾರತದಲ್ಲಿ ಕಾಣಸಿಗುವುದು ಕೂಡಾ ವಿರಳ. ದೇವಾಲಯದ ಗರ್ಭಗುಡಿಯು ಮತ್ತು ಅದರ ಪ್ರವೇಶ ದ್ವಾರವು ಎಲ್ಲಾ ದೇವಾಲಯಗಳಂತೆ ಕಿರಿದಾಗಿರದೆ, ವಿಶಾಲವಾಗಿದ್ದು ಸರ್ವ ಋತುಗಳಲ್ಲಿಯೂ ಒಂದೇ ರೀತಿಯ ಹವಾಗುಣ ಹೊಂದಿದ್ದು, ದೇವಸ್ಥಾನದೊಳಗೆ ಮಂತ್ರೋಚ್ಚಾರಣೆ ಪ್ರತಿಧ್ವನಿಸುತ್ತದೆ.

ದರ್ಶನ ಸಮಯ - ಬೆಳಿಗ್ಗೆ 6:30 ರಿಂದ 12:00 ಮತ್ತು ಸಂಜೆ 5:00 ರಿಂದ 8:00

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಮಡಿಕೇರಿ ಪುರವರಾಧೀಶ್ವರ ಶ್ರೀ ಪರಮೇಶ್ವರಿ ದೇವೀ ಸಮೇತ ಶ್ರೀ ಓಂಕಾರೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ದೆವಮುನಿ ಪ್ರವರಾರ್ಚಿತ ಲಿಂಗಂ ಕಾಮದಹನ ಕರುಣಾಕರ ಲಿಂಗಂ | ರಾವಣದರ್ಪ ವಿನಾಶಕ ಲಿಂಗಂ ತತ್ಪ್ರಣಮಾಮಿ ಸದಾ ಶಿವಲಿಂಗಂ ||

ಉತ್ಸವಗಳು - ಮಹಾಶಿವರಾತ್ರಿ ಉತ್ಸವ, ಶ್ರೀ ಸುಬ್ರಹ್ಮಣ್ಯ ಷಷ್ಠಿ, ತೆಪ್ಪೋತ್ಸವ ಉತ್ಸವ/ಹುತ್ತರಿ

ಪ್ರೇಕ್ಷಣೀಯ ಸ್ಥಳಗಳು - ಮಡಿಕೇರಿ ಕೋಟೆ, ಪ್ರಾಚ್ಯ ವಸ್ತು ಸಂಗ್ರಹಾಲಯ, ಅಬ್ಬಿ ಜಲಪಾತ, ರಾಜರ ಗದ್ದುಗೆ, ನಾಲ್ಕುನಾಡು ಅರಮನೆ, ಕಕ್ಕಬೆ

## 3. ಕೊಡಗು ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಮಹಾಮೃತ್ಯುಂಜಯ ದೇವಸ್ಥಾನ, ಬಾಡಗರಕೇರಿ, ವಿರಾಜಪಟೆ ತಾಲ್ಲೂಕು
2. ಗೋಲ್ಡನ್ ಟೆಂಪಲ್ (ನಾಮ್‌ಡ್ರೊಲಿಂಗ್ ಮಠ) ಬಯಲಕುಪ್ಪೆ, ಕುಶಾಲನಗರ ತಾಲ್ಲೂಕು
3. ಶ್ರೀ ಪಾಡಿ ಇಗ್ಗುತಪ್ಪ ದೇವಸ್ಥಾನ ಕಕ್ಕಬೆ,

# 6. ಮೈಸೂರು ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಮೈಸೂರು ಒಂದು ದಕ್ಷಿಣಒಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಕೊಡಗು, ಹಾಸನ, ಮಂಡ್ಯ, ಚಾಮರಾಜನಗರ ಜಿಲ್ಲೆಗಳು ಹಾಗೂ ತಮಿಳುನಾಡು ಸುತ್ತುವರಿದಿವೆ. ಮೈಸೂರು ಪಟ್ಟಣವು ಜಿಲ್ಲಾ ಕೇಂದ್ರ. ಹೆಗ್ಗಡದೇವನಕೋಟೆ, ಹುಣಸೂರು, ಕೃಷ್ಣರಾಜನಗರ, ಮೈಸೂರು, ನಂಜನಗೂಡು, ಪಿರಿಯಾಪಟ್ಟಣ, ಸರಗೂರು, ತಿರುಮಕೂಡಲು ನರಸೀಪುರ ಎಂಬ 8 ತಾಲ್ಲೂಕುಗಳನ್ನು ಹೊಂದಿದೆ.

ಕಾವೇರಿ, ಕಬಿನಿ, ನುಗು, ಗುಂಡಾಲ್ ಮತ್ತು ಲಕ್ಷ್ಮಣತಿರ್ಥ ನದಿಗಳು ಮುಖ್ಯವಾದವು.

ಮೈಸೂರು ರೇಶ್ಮೆ, ಮೈಸೂರು ಮಲ್ಲಿಗೆ, ಮೈಸೂರು ವೀಳ್ಯದೆಲೆ, ಮೈಸೂರು ಪಾಕ, ಮೈಸೂರು ಮಸಾಲೆದೋಸೆ, ನಂಜನಗೂಡು ರಸಬಾಳೆ, ಮುಂತಾದವು ಈ ಜಿಲ್ಲೆಯ ವೈಶಿಷ್ಟ್ಯಗಳು.

ಮೈಸೂರು ಅರಮನೆ, ಮೈಸೂರು ಮೃಗಾಲಯ, ಕೃಷ್ಣ ರಾಜ ಸಾಗರ ಅಣೆಕಟ್ಟು, ಬೃಂದಾವನ ಉದ್ಯಾನವನ, ಸಂಜೀವಿನಿ ಉದ್ಯಾನವನ, ಲಿಂಗಾಂಬುದಿ ಕೆರೆ, ಕುಕ್ಕರಹಳ್ಳಿ ಸರೋವರ, ಕಾರಂಜಿ ಕೆರೆ, ವರುಣಾ ಸರೋವರ, ಮೆಲೊಡಿ ವರ್ಲ್ಡ್ ವ್ಯಾಕ್ಸ್ ಮ್ಯೂಸಿಯಂ, ಮರಳು ಶಿಲ್ಪಗಳ ವಸ್ತು ಸಂಗ್ರಹಾಲಯ, ರಂಗಾಯಣ ನಾಟಕ ಪ್ರದರ್ಶನ ಕೇಂದ್ರ, ಯೋಗ ಶಿಕ್ಷಣ ಕೇಂದ್ರಗಳು, ಮುಂತಾದವು ಮೈಸೂರು ಜಿಲ್ಲೆಯ ಪ್ರವಾಸೀ ಆಕರ್ಷಣೆಗಳು.

1. ನೈಸರ್ಗಿಕ ಇತಿಹಾಸ ವಸ್ತು ಸಂಗ್ರಹಾಲಯ, ಮೈಸೂರು
2. ಜಾನಪದ ವಸ್ತು ಸಂಗ್ರಹಾಲಯ, ಮೈಸೂರು
3. ಜಯಚಮರಾಜೇಂದ್ರ ಆರ್ಟ್ ಗ್ಯಾಲರಿ ವಸ್ತು ಸಂಗ್ರಹಾಲಯ ಮೈಸೂರು
4. ರೈಲ್ವೇ ಪಾರಂಪರಿಕ ವಸ್ತು ಸಂಗ್ರಹಾಲಯ, ಮೈಸೂರು
5. ಆರ್. ಕೆ. ನಾರಾಯಣ ಐತಿಹಾಸಿಕ ಮನೆ ವಸ್ತು ಸಂಗ್ರಹಾಲಯ, ಮೈಸೂರು

ಖರೀದಿಗಳು - ಮೈಸೂರು ಸಿಲ್ಕ್ ಸೀರೆ, ಪ್ರಸಿದ್ಧ ಚೆನ್ನಪಟ್ಟಣ ಮರದ ಗೊಂಬೆಗಳು, ಮೈಸೂರು ಸ್ಯಾಂಡಲ್ ಸೋಪ್, ಮೈಸೂರು ಪಾಕ್, ಶ್ರೀಗಂಧದ ಮರ ಮತ್ತು ಬೀಟೆಮರದ ಕರಕುಶಲ ವಸ್ತುಗಳು ಕಲಾಕೃತಿಗಳು, ಕಲ್ಲಿನ ಶಿಲ್ಪಗಳು, ಗಂಜಿಫಾ ವರ್ಣಚಿತ್ರಗಳು ಮತ್ತು ಗಂಧದ ಕಡ್ಡಿಗಳು


MYSORE DISTRICT
KARNATAKA
N
HASSAN DISTRICT
MANDYA DISTRICT
KRISHNARAJANAGARA
PIRIYAPATANA
HUNSUR
KODAGU DISTRICT
NANJANGUD
HEGGADAVENKOTE
CHAMARAJANAGAR DISTRICT
KERALA DISTRICT
KEY MAP
LEGEND
Metalled road
Railway track
Taluk boundary
District headquarters
Taluk headquarters
Hilly area

## 1. ಚಾಮುಂಡೇಶ್ವರಿ ದೇವಸ್ಥಾನ ಚಾಮುಂಡಿ ಬೆಟ್ಟ

ಬೆಟ್ಟದ ಮೇಲ್ಭಾಗವನ್ನು ಹತ್ತನೆಯ ಶತಮಾನದ ಹೊತ್ತಿಗಾಗಲೇ ಪುಣ್ಯ ಕ್ಷೇತ್ರವೆಂದು ಪರಿಗಣಿಸಲಾಗಿತ್ತು. ಇಲ್ಲಿರುವ ಆ ಕಾಲದ ಶಾಸನಗಳಲ್ಲಿ ಇದನ್ನು ಮಬ್ಬೆಲದ ತೀರ್ಥ ಅಥವಾ ಮರ್ಬ್ಬಳದ ತೀರ್ಥ ಎಂದು ಕರೆದಿದೆ. ಇಲ್ಲಿ ಹಲವರು ಸಿದ್ಧಿ ಪಡೆದರೆಂದು ಶಾಸನಗಳು ತಿಳಿಸುತ್ತವೆ. ಈಗ ಇಲ್ಲಿರುವ ಮಹಾಬಲೇಶ್ವರ ದೇವಸ್ಥಾನ, ಹೊಯ್ಸಳ ವಿಷ್ಣುವರ್ಧನನ ಕಾಲಕ್ಕಿಂತ ಮುಂಚೆಯೇ ನಿರ್ಮಿತವಾಗಿತ್ತು. ವಿಷ್ಣುವರ್ಧನನ ಕಾಲದಲ್ಲಿ 1128ರಲ್ಲಿ ಈ ಮರ್ಬ್ಬಳದ ತೀರ್ಥಕ್ಕೆ ದತ್ತಿ ಬಿಟ್ಟಿದ್ದ ಬಗ್ಗೆ ಶಾಸನವಿದೆ.

ಬೆಟ್ಟದ ಮೇಲೆ ಪ್ರತಿಷ್ಠಾಪಿಸಲಾಗಿದ್ದ ಮಹಿಷಾಸುರ ಮರ್ಧಿನಿಯನ್ನು ಮೈಸೂರು ಅರಸರು ಬೆಟ್ಟದ ತಾಯಿ ಚಾಮುಂಡೇಶ್ವರಿ ಎಂದು ಕರೆದು, ತಮ್ಮ ಕುಲದೇವತೆಯಾಗಿ ಪೂಜಿಸಿದರು ಎನ್ನುತ್ತದೆ ಇತಿಹಾಸ. ಅಂದಿನಿಂದ ಮರ್ಬಳ ತೀರ್ಥಕ್ಕೆ ಚಾಮುಂಡಿ ಬೆಟ್ಟ ಎಂಬ ಹೆಸರು ಬಂದಿರಬಹುದು ಎನ್ನುತ್ತಾರೆ ಇತಿಹಾಸ ತಜ್ಞರು.

16 ಅಡಿ ಎತ್ತರದ ಹೆಬ್ಬಂಡೆಯಲ್ಲಿ ಕೆತ್ತಲಾಗಿರುವ ನಂದಿಯ ಸುಂದರ ಮೂರ್ತಿ ಬೆಟ್ಟದ ಪ್ರಮುಖ ತಾಣಗಳಲ್ಲಿ ಒಂದಾಗಿದೆ. ನಂದಿಯ ಮೂರ್ತಿಯಲ್ಲಿ ಗಂಟೆಸರ, ಗೆಜ್ಜೆಸರಗಳನ್ನು, ಶಿಲ್ಪಿ ಸುಂದರವಾಗಿ ಕೆತ್ತಿದ್ದಾರೆ. ಬೆಟ್ಟದ ಮೇಲಿರುವ ಚಾಮುಂಡೇಶ್ವರಿಯ ಪುರಾತನ ದೇವಾಲಯ ದ್ರಾವಿಡ ಶೈಲಿಯಲ್ಲಿದೆ. ಹಳೆಯ ದೇವಾಲಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ನವೀಕರಿಸಿ ಇದರ ಮಹಾದ್ವಾರಕ್ಕೆ ಒಂದು ಸುಂದರವಾದ ಗೋಪುರವನ್ನು ಕಟ್ಟಿಸಿದ್ದಾರೆ. ದೇವಾಲಯ ಇವರ ಕಾಲದಲ್ಲಿ ಸಾಕಷ್ಟು ಅಭಿವೃದ್ಧಿ ಕಂಡಿತು.

ದ್ರಾವಿಡ ಶೈಲಿಯ ದೇವಾಲಯಗಳಂತೆ ಈ ದೇವಾಲಯದಲ್ಲೂ ಸುಕನಾಸಿ ಮತ್ತು ನವರಂಗಗಳಿವೆ. ನವರಂಗಗಳಿಗೆ ಹಾಕಿಸಿರುವ ಹಿತ್ತಾಳೆ ತಗಡುಗಳು, ಸಿಂಹವಾಸನ, ಹಲವು ವಾಹನಗಳು, ದೇವಿಯ ಸ್ತೋತ್ರವನ್ನೊಳಗೊಂಡ ನಕ್ಷತ್ರಮಾಲಿಕೆ ಮತ್ತು ಇತರ ಆಭರಣಗಳನ್ನು ರಾಜಮನೆತವರು ದೇವಿಗೆ ಸಮರ್ಪಿಸಿದ್ದಾರೆ.

ಪ್ರತಿವರ್ಷ ಆಶ್ವೀಜ ಶುದ್ಧ ಹುಣ್ಣಿಮೆಯಂದು ಚಾಮುಂಡೇಶ್ವರಿ ರಥೋತ್ಸವ ಜರುಗುತ್ತದೆ. ರಥೋತ್ಸವದ ಎರಡು ದಿನಗಳ ಬಳಿಕ ರಾತ್ರಿ ದೇವಾಲಯದ ಸಮೀಪದಲ್ಲೇ ಇರುವ ಕೊಳದಲ್ಲಿ ನಡೆಯುವ ತೆಪ್ಪೋತ್ಸವ ನೋಡಲು ದೇಶ ವಿದೇಶಗಳಿಂದಲೂ ಪ್ರವಾಸಿಗರು ಆಗಮಿಸುತ್ತಾರೆ.

ಬೆಟ್ಟದ ಮೇಲೆ ಹೋಗಲು ಡಾಂಬರು ರಸ್ತೆಯೂ ಇದೆ, ನಗರ ಸಾರಿಗೆ ಸೌಲಭ್ಯವೂ ಇದೆ. ಬೆಟ್ಟದ ಬುಡದಿಂದ ಒಂದು ಸಾವಿರ ಮೆಟ್ಟಿಲುಗಳನ್ನು ಏರುವ ಮೂಲಕ ಸಹ ಚಾಮುಂಡೇಶ್ವರಿ ದೇವಸ್ಥಾನ ತಲುಪಬಹುದು. ವಾಹನದಲ್ಲಿ ಬೆಟ್ಟಕ್ಕೆ ಹೋಗಿ ಇಳಿಯುತ್ತಿದ್ದಂತೆಯೇ ದೇವಾಲಯಕ್ಕೆ ಹೋಗುವ ದಾರಿಯಲ್ಲಿರುವ 12 ಅಡಿ ಎತ್ತರದ ಮಹಿಷಾಸುರನ ಬೃಹತ್ ಪ್ರತಿಮೆ ಪ್ರವಾಸಿಗರನ್ನು, ಭಕ್ತರನ್ನು ಸ್ವಾಗತಿಸುತ್ತದೆ. ಅಂಗಡಿಗಳ ಸಾಲಿನಲ್ಲಿ ಮುಂದೆ ಸಾಗಿದರೆ ಮಹಿಷಾಸುರನನ್ನೇ ಕೊಂದ ತಾಯಿ ಚಾಮುಂಡಿಯ ದರ್ಶನವೂ ದೊರಕುತ್ತದೆ.

ದರ್ಶನ ಸಮಯ - ಬೆಳಿಗ್ಗೆ 7.30 ರಿಂದ ಮಧ್ಯಾಹ್ನ 2.00 ಮಧ್ಯಾಹ್ನ 3.30 ರಿಂದ ಸಂಜೆ 6.00 ಮತ್ತು ಸಂಜೆ 7:30 pm ರಿಂದ ರಾತ್ರಿ 9.00

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಮೈಸೂರು ಪುರವರಾಧೀಶ್ವರೀ ಶ್ರೀ ಮಹಾಬಲೇಶ್ವರ ಸ್ವಾಮೀ ಸಮೇತ ಶ್ರೀ ಚಾಮುಂಡೇಶ್ವರೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ರೌದ್ರಾಯೈ ನಮೋ ನಿತ್ಯಾಯೈ ಗೌರ್ಯೈ ಧಾತ್ರ್ಯೈ ನಮೋ ನಮಃ | ಜ್ಯೋತ್ಸ್ನಾಯೈ ಚೇಂದುರೂಪಿಣ್ಯೈ ಸುಖಾಯೈ ಸತತಂ ನಮಃ ||

ಉತ್ಸವಗಳು - ಶರನ್ನವರಾತ್ರಿ ಉತ್ಸವಗಳು, ದೀಪೋತ್ಸವ, ರಥೋತ್ಸವ, ತೆಪ್ಪೋತ್ಸವ

ಭಕ್ತರಿಗಾಗಿ ಸೌಲಭ್ಯಗಳು - ಲಡ್ಡು ಪ್ರಸಾದ, ದಾಸೋಹ (ಉಚಿತ ಊಟ) ವ್ಯವಸ್ಥೆ, ಕುಡಿಯುವ ನೀರು, ವಾಹನ ನಿಲುಗಡೆ, ಪ್ರಾಥಮಿಕ ಆರೋಗ್ಯ ಘಟಕ, 20 ಕೊಠಡಿಯ ಅತಿಥಿ ಗೃಹ, ಅಲ್ಲಲ್ಲಿ ಶೌಚಾಲಯಗಳು

## 2. ನಂಜುಂಡೇಶ್ವರ ದೇವಸ್ಥಾನ ನಂಜನಗೂಡು

ನಂಜನಗೂಡು ಪ್ರಸಿದ್ಧವಾಗಿರುವುದು ಇಲ್ಲಿಯ ಶ್ರೀಕಂಠೇಶ್ವರ (ನಂಜುಂಡೇಶ್ವರ) ದೇವಾಲಯದಿಂದ. ಕರ್ನಾಟಕದ ಶ್ರೀಮಂತ ದೇವಾಲಯಗಳಲ್ಲಿ ಒಂದಾಗಿರುವ ಇದು ಊರಿನ ಪೂರ್ವದ ಅಂಚಿನಲ್ಲಿ ಕಪಿಲಾ ಮತ್ತು ಗುಂಡ್ಲುಹೊಳೆಯ (ಕೌಂಡಿನ್ಯ ನದಿ) ಸಂಗಮದ ಬಳಿ ಪೂರ್ವಾಭಿಮುಖವಾಗಿದೆ. ಶ್ರೀಕಂಠೇಶ್ವರ ದೇವಾಲಯವು ದ್ರಾವಿಡ ಶೈಲಿಯ ಕಟ್ಟಡ. ಇದು 117 ಮೀ. ಉದ್ದ, 48 ಮೀ. ಅಗಲ ಇದೆ. ಇದರಲ್ಲಿ 147 ಕಂಬಗಳಿವೆ. ಇದರ ಒಟ್ಟು ಆಚ್ಛಾದಿತ ಪ್ರದೇಶ 4,831 ಚ.ಮೀ. ಇದು ಕರ್ನಾಟಕದಲ್ಲೇ ಅತ್ಯಂತ ದೊಡ್ಡ ದೇವಸ್ಥಾನ. ಹೊರಗೋಡೆಗಳು ಸುಮಾರು 3.7 ಮೀ. ಎತ್ತರವಾಗಿವೆ. ಸುತ್ತಲೂ ದಕ್ಷಿಣ, ಉತ್ತರ ಮತ್ತು ಪಶ್ಚಿಮ ಭಾಗಗಳಲ್ಲಿ ಅಧಿಷ್ಠಾನ, ಹಿಂದೆ ಗೋಡೆ, ಮುಂದೆ ಕಂಬಸಾಲಿರುವ ಕೈಸಾಲೆ ಇವೆ. (ಈಗ ದಕ್ಷಿಣದ ಕೈಸಾಲೆಯನ್ನು ಪೂರ್ಣವಾಗಿಯೂ ಉತ್ತರದ್ದನ್ನು ಸ್ವಲ್ಪ ಭಾಗಗಳಲ್ಲಿಯೂ ಮುಚ್ಚಲಾಗಿದೆ). ಮೇಲೆ ಸುತ್ತಲೂ ದೇವ ಮತ್ತು ಇತರ ಶಿಲ್ಪಗಳಿರುವ ಕೂಟ ಮತ್ತು ಶಿಖರಗಳ ಗಚ್ಚಿನ ಹಾರ ಇದೆ. ಪೂರ್ವಭಾಗದಲ್ಲಿನ ಮಹಾದ್ವಾರದ ಮುಂದೆ ಇಕ್ಕಡೆ ಕೈಸಾಲೆಯಿರುವ ಒಂದು ಮುಖಮಂಟಪವಿದೆ. ಮಹಾದ್ವಾರ ಬೃಹತ್ ರಚನೆ. ಒಳಚಾವಣಿಯ ಎತ್ತರ ಸುಮಾರು 5.5 ಮೀ. ವಿಶಾಲ ಮಂಟಪದಂತಿರುವ ಈ ಭಾಗದಲ್ಲಿನ ದಪ್ಪ ಎತ್ತರದ ಬಾಗಿಲ ತೋಳುಗಳ ಮೇಲೆ ಮೋಹಿನಿ, ದ್ವಾರಪಾಲಕ ಮೊದಲಾದ ಶಿಲ್ಪಾಲಂಕರಣಗಳಿವೆ. ಮಹಾದ್ವಾರದ ಮೇಲೆ ಏಳು ಅಂತಸ್ತುಗಳಲ್ಲಿ ಎದ್ದಿರುವ ಸುಮಾರು 37 ಮೀ. ಎತ್ತರದ ಬೃಹತ್ ಗೋಪುರದ ಮೇಲ್ತುದಿಯಲ್ಲಿ ಚಿನ್ನದ ಕಲಶ, 3 ಮೀಟರುಗಳಿಗೂ ಎತ್ತರವಾಗಿರುವ ಏಳು ಕಲಶಗಳನ್ನು ಅಷ್ಟೇ ಎತ್ತರದ ಎರಡು ಕೊಂಬುಗಳ ಮಧ್ಯೆ ಸಾಲಾಗಿ ಜೋಡಿಸಲಾಗಿದೆ.

ದರ್ಶನ ಸಮಯ - ಬೆಳಿಗ್ಗೆ 6:00 AM ರಿಂದ ರಾತ್ರಿ 8:30 PM ರವರೆಗೆ

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ನಂಜನಗೂಡು ಪುರವರಾಧೀಶ್ವರ ಶ್ರೀ ಪಾರ್ವತೀ ದೇವೀ ಸಮೇತ ಶ್ರೀ ಶ್ರೀಕಂಠೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ॥

ಪ್ರಣಾಮ ಸ್ತೋತ್ರ - ಶಿವಾಯ ಗೌರೀ ವದನಾಬ್ಜ ಬೃಂದ । ಸೂರ್ಯಾಯ ದಕ್ಷಾಧ್ವರ ನಾಶಕಾಯ । ಶ್ರೀ ನೀಲಕಂಠಾಯ ವೃಷಭಧ್ವಜಾಯ । ತಸ್ಮೈ "ಶಿ" ಕಾರಾಯ ನಮಃ ಶಿವಾಯ ॥

ಭಕ್ತರಿಗಾಗಿ ಸೌಲಭ್ಯಗಳು - ತೀರ್ಥಪ್ರಸಾದ ವಿತರಣೆ, ದಾಸೋಹ (ಉಚಿತ ಊಟ) ವ್ಯವಸ್ಥೆ, ಕುಡಿಯುವ ನೀರು, ವಾಹನ ನಿಲುಗಡೆ, ಪ್ರಾಥಮಿಕ ಆರೋಗ್ಯ ಘಟಕ, ಅತಿಥಿ ಗೃಹ, ಅಲ್ಲಲ್ಲಿ ಶೌಚಾಲಯಗಳು, ಲಗೇಜು ಕೊಠಡಿ, ವಸ್ತ್ರ ಬದಲಾಯಿಸಿಕೊಳ್ಳುವ ಕೊಠಡಿಗಳು, ನದಿ ತೀರದಲ್ಲಿ ಸ್ನಾನಘಟ್ಟ,

ಈ ನಗರವು “ನಂಜನಗೂಡು ರಸಬಾಳೆಹಣ್ಣಿಗೆ” ಮತ್ತು “ನಂಜನಗೂಡು ಹಲ್ಲುಪುಡಿ” ಗಳಿಗೆ ಹೆಸರುವಾಸಿಯಾಗಿದೆ.

**ನಂಜನಗೂಡಿನಲ್ಲಿ ಇತರ ಆಕರ್ಷಣೆಗಳು** - ಶ್ರೀ ಪರಶುರಾಮ ದೇವಸ್ಥಾನ (ಪರಶುರಾಮ ಕ್ಷೇತ್ರ), ಶ್ರೀ ರಾಘವೇಂದ್ರ ಸ್ವಾಮಿ ಮಠ, ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಶ್ರೀ ಗಾಯತ್ರಿ ದೇವಿ ದೇವಸ್ಥಾನ, ಶ್ರೀ ಗುರು ದತ್ತಾತ್ರೇಯ ಸ್ವಾಮಿ ದೇವಸ್ಥಾನ, ಶ್ರೀ ಪ್ರತ್ಯಂಗೀರ ದೇವಿ, ಶ್ರೀ ಮಹಾ ಶರಭೇಶ್ವರ ಸ್ವಾಮಿ, ಶ್ರೀ ಅಯ್ಯಪ್ಪ ಸ್ವಾಮಿ ದೇವಸ್ಥಾನ. ಶ್ರೀ ಶೃಂಗೇರಿ ಶಂಕರ ಮಠ, ಶ್ರೀ ಕೃಷ್ಣ ದೇವಸ್ಥಾನ, ಧ್ಯಾನ ಮಂದಿರ, ಎನ್.ಆರ್.ಅಗ್ರಹಾರ ರಸ್ತೆ. ಕಪಿಲಾ (ಕಬಿನಿ) ನದಿ, ಕಪಿಲಾ ನದಿಯ ದಂಡೆಯಲ್ಲಿರುವ ಕಂಬದ ಸ್ಮಾರಕ,

**ನಂಜನಗೂಡಿನ ಹತ್ತಿರದ ಆಕರ್ಷಣೆಗಳು** -

1. ಹಳೆಯ ರೈಲ್ವೆ ಸೇತುವೆ (ಕಪಿಲಾ ನದಿಗೆ ಅಡ್ಡಲಾಗಿ). (2 ಕಿ.ಮೀ) ಮೈಸೂರು ಮಾರ್ಗ.
2. ಹೆಡಥಲೆ ಗ್ರಾಮದ ಶ್ರೀ ಲಕ್ಷ್ಮೀಕಾಂತ ದೇವಸ್ಥಾನ. (12 ಕಿ.ಮೀ) ಚಾಮರಾಜನಗರ ಮಾರ್ಗ.
3. ಹೆಮ್ಮರಗಾಲ ಗ್ರಾಮದ ಸಂತಾನ (ಹುಚ್ಚಾ) ಶ್ರೀ ಗೋಪಾಲ ಕೃಷ್ಣ ದೇವಸ್ಥಾನ. (13 ಕಿ.ಮೀ) ಚಾಮರಾಜನಗರ ಮಾರ್ಗ.
4. ಸುತ್ತೂರು ಶ್ರೀ ಕ್ಷೇತ್ರ. (12 ಕಿ.ಮೀ) ಟಿ.ನರಸಿಪುರ ಮಾರ್ಗ. (ದೇವಸ್ಥಾನಗಳು, ಗದ್ದುಗೆ, ವಸ್ತು ಸಂಗ್ರಹಾಲಯ, ಅತಿಥಿ ಗೃಹ)
5. ಕಳಲೆ ಗ್ರಾಮದ ಶ್ರೀ ಲಕ್ಷ್ಮೀಕಾಂತ ದೇವಸ್ಥಾನ. (10 ಕಿ.ಮೀ) ಗುಂಡ್ಲುಪೇಟೆ ಮಾರ್ಗ.

**ನಂಜನಗೂಡಿನ ಸುತ್ತಮುತ್ತಲಿನ ಸ್ಥಳಗಳು** (ಅಂದಾಜು ಪ್ರಯಾಣದ ಸಮಯದೊಂದಿಗೆ)

1. ಟಿ.ನರಸಿಪುರದಲ್ಲಿ ಕಾವೇರಿ ಕಪಿಲಾ ಸಂಗಮ ಮತ್ತು ದೇವಸ್ಥಾನಗಳು. (1 ಗಂ)
2. ಗುಂಡ್ಲುಪೇಟೆ ತಾಲ್ಲೂಕಿನ ಹಿಮವದ್ ಗೋಪಾಲಸ್ವಾಮಿ ಬೆಟ್ಟದಲ್ಲಿರುವ ಶ್ರೀ ಗೋಪಾಲ ಕೃಷ್ಣ ದೇವಸ್ಥಾನ. (1 ಗಂ)

## 6. ವೈದ್ಯನಾಥೇಶ್ವರ ದೇವಾಲಯಗಳ ಗುಂಪು ತಲಕಾಡು

ತಲಾ ಮತ್ತು ಕಾಡ ಎಂಬ ಇಬ್ಬರು ಕಿರಾತ ಸೋದರರಿಂದ ಈ ಊರಿಗೆ ತಲಕಾಡು ಎಂದು ಹೆಸರು ಬಂದಿದೆ ಎಂಬುದು ಸ್ಥಳ ಪುರಾಣ. ತಲಕಾಡಿನ ಶಿವನಿಗೆ ಗಜಾರಣ್ಯನಾಥ ಎಂದೂ ಕರೆಯುತ್ತಾರೆ.

ಮೈಸೂರು ಜಿಲ್ಲೆಯಲ್ಲಿನ ಪ್ರಮುಖ ಯಾತ್ರಾಸ್ಥಳಗಳಲ್ಲಿ ಒಂದಾಗಿದೆ. ಇದು ಮೈಸೂರಿನಿಂದ ಸುಮಾರು 45 ಕಿ.ಮೀ ದೂರದಲ್ಲಿದೆ. ಇಲ್ಲಿರುವ ದೇವಾಲಯಗಳು ಗಂಗರ ಕಾಲದ ದೇವಾಲಯಗಳು. ಇಲ್ಲಿ ನಡೆಯುವ ಪಂಚಲಿಂಗ ದರ್ಶನ ವಿಶೇಷವಾದದ್ದು ಹಾಗೂ ಪಂಚಲಿಂಗ ದರ್ಶನವು 12 ವರ್ಷಗಳಿಗೊಮ್ಮೆ ನಡೆಯುತ್ತದೆ. ಇದು ಐತಿಹಾಸಿಕವಾಗಿ ಹಾಗೂ ಧಾರ್ಮಿಕವಾಗಿ ಪ್ರಸಿದ್ಧ ಸ್ಥಳವಾಗಿದೆ. ತಲಕಾಡು ಒಂದು ಕಾಲದಲ್ಲಿ 30 ದೇವಾಲಯಗಳಿಂದ ಕೂಡಿದ ಭವ್ಯ ನಗರವಾಗಿತ್ತು. ಆದರೆ 16ನೇ ಶತಮಾನದಲ್ಲಿ ಇವುಗಳೆಲ್ಲವು ಮರಳಿನಲ್ಲಿ ಮುಚ್ಚಿ ಹೋದವು.

ಎರಡು ನಕ್ಷತ್ರಗಳು ಒಂದುಗೂಡಲು ಅಂದರೆ ಪಂಚಲಿಂಗ ದರ್ಶನ ಕಾರ್ತಿಕ ಮಾಸದಲ್ಲಿ ಅಮವಾಸ್ಯೆಯ ದಿನ ಆಚರಿಸಲಾಗುತ್ತದೆ. ಸಂಪ್ರದಾಯಸ್ಥರು ಮೊದಲು ಗೋಕರ್ಣ ತೀರ್ಥದಲ್ಲಿ ಸ್ನಾನ ಮಾಡಬೇಕು. ನಂತರ ಗೋಕರ್ಣೇಶ್ವರ ಮತ್ತು ಚಂಡಿಕಾ ದೇವಿ ಪೂಜೆ, ತದನಂತರ ವೈದ್ಯನಾಥೇಶ್ವರನ ಪೂಜೆ, ನಂತರ ಕ್ರಮವಾಗಿ ಅರ್ಕೇಶ್ವರ, ಪಾತಾಳೇಶ್ವರ, ಮರುಳೇಶ್ವರ, ಮಲ್ಲಿಕಾರ್ಜುನರಿಗೆ ಪೂಜೆ ಮತ್ತು ಕೀರ್ತಿ ನಾರಾಯಣ ಪೂಜೆ.

ದರ್ಶನ ಸಮಯ - ಬೆಳಿಗ್ಗೆ 8:30 to 1:30 ಮತ್ತು ಸಂಜೆ 4:30 to 8:30

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ತಲಕಾಡು ಪುರವರಾಧೀಶ್ವರ ಶ್ರೀ ಪಾರ್ವತೀ ದೇವೀ ಸಮೇತ ಶ್ರೀ ವೈದ್ಯನಾಥೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ವಾಹನಂ ವೃಷಭೋ ಯಸ್ಯ ವಾಸುಕಿಃ ಕಂಠಭೂಷಣಂ |
ವಾಮೇ ಶಕ್ತಿಧರಂ ದೇವಂ ವಕಾರಾಯ ನಮೋ ನಮಃ ||

ಉತ್ಸವಗಳು - ಶಿವರಾತ್ರಿ, ಜಾತ್ರ ಮಹೋತ್ಸವ, ಮುಡುಕುತೋರೆ ಜಾನುವಾರು ಹಬ್ಬ

## 7. ಗುಂಜಾ ನರಸಿಂಹಸ್ವಾಮಿ ದೇವಸ್ಥಾನ ಟಿ ನರಸೀಪುರ

ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದಲ್ಲಿರುವ ಗುಂಜಾ ನರಸಿಂಹಸ್ವಾಮಿ ದೇವಸ್ಥಾನವು ಪ್ರಾಚೀನ ಮಂದಿರಗಳಲ್ಲಿ ಒಂದು. ಸರಿ ಸುಮಾರು ಒಂದು ಸಾವಿರ ವರ್ಷಗಳ ಇತಿಹಾಸ ಇದಕ್ಕುಂಟು. ಇದರ ಉದ್ಭವ ಬಹಳ ಕುತೂಹಲದಾಯಕವಾಗಿದೆ. ಈ ಮೊದಲು ಸ್ವಾಮಿ ಇದ್ದದ್ದು ಹುತ್ತದಲ್ಲಿ. ಅಗಸನೋರ್ವ ಮಂದಿರ ಕಟ್ಟಿಸಿದ ಪ್ರಸಂಗವಿದು. ಸ್ವಾಮಿಯು ಒಬ್ಬ ಅಗಸನ ಕನಸಿನಲ್ಲಿ ಬಂದು ತಾನು ಹುತ್ತದಲ್ಲಿರುವುದಾಗಿಯೂ ತನಗೆ ಮಂದಿರ ನಿರ್ಮಿಸಬೇಕೆಂದೂ ಹೇಳುತ್ತಾನೆ. ಅಗಸನಿಗೆ ಆಶ್ಚರ್ಯವಾದರೂ "ನನಗೆ ಏನೂ ಗತಿ ಇಲ್ಲ. ಹೇಗೆ ದೇವಸ್ಥಾನ ಕಟ್ಟಿಸಲಿ?" ಎಂದು ಕೇಳುತ್ತಾನೆ. ಆಗ ಸ್ವಾಮಿ, "ನೀನು ಒಗೆಯುತ್ತಿರುವ ಕಲ್ಲಿನ ಕೆಳಗೆ ಕೊಪ್ಪರಿಗೆ ಹಣ ಸಿಗುತ್ತೆ. ಅದರಿಂದ ಮಂದಿರ ಕಟ್ಟಿಸು," ಎನ್ನುತ್ತಾನೆ. ಅದರಂತೆ ಅಗಸನು ಮರುದಿನ ಕಲ್ಲು ತೆಗೆದು ನೋಡಿದಾಗ ಕೊಪ್ಪರಿಗೆ ಹಣ ಕಾಣುತ್ತದೆ. ಅಗಸನು ಈ ಹಣದಿಂದ ಗರ್ಭಗುಡಿ, ಸುಖನಾಸಿ ಎಂಬ ಎರಡಂಕಣ ಕಟ್ಟಿಸಿದ ಎಂದು ಶಾಸನಗಳು ಹೇಳುತ್ತವೆ. ಮಂದಿರದಿಂದ ಸಂತುಷ್ಟನಾದ ಭಗವಂತನು ಅಗಸನಿಗೆ, "ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ಏನು ವರ ಬೇಕು ಕೇಳು" ಎನ್ನುತ್ತಾನೆ. ಅದಕ್ಕೆ ಅಗಸನು, "ನಾನು ಪಾಪ ಮಾಡಿದ್ದೇನೆ. ನಾನು ಕಾಶಿಗೆ ಹೋಗಿ ಪುಣ್ಯ ಸ್ನಾನ ಮಾಡಿ ಬರಬೇಕೆಂದಿದ್ದೇನೆ. ಅದಕ್ಕೆ ಸಹಾಯ ಮಾಡು" ಎಂದು ಕೇಳುತ್ತಾನೆ. ಆಗ ಭಗವಂತನು, "ಕಾಶಿಗೆ ಹೋಗಬೇಕಾಗಿಲ್ಲ. ಕಾಶಿಗಿಂತ ಇದೇ ಒಂದು ಗುಲಗಂಜಿ ತೂಕ ಜಾಸ್ತಿ ಪುಣ್ಯ ಇರುವ ಸ್ಥಳ" ಎಂದು ಸಾರುತ್ತಾನೆ.

ಇಲ್ಲಿ ಒಂದು ವಿವರಣೆ ಅಗತ್ಯ. ಅಲ್ಲಿ ಗಂಗಾ, ಸರಸ್ವತಿ, ಯಮುನೆಯರ ಸಂಗಮವಾದರೆ ಇಲ್ಲಿ ಕಾವೇರಿ, ಕಪಿಲ, ಸಟಿಕ ಸರೋವರಗಳು ಸಂಗಮವಾಗಿದೆ. ಅಲ್ಲಿ ಸರಸ್ವತಿ ಗುಪ್ತಗಾಮಿನಿಯಾದರೆ ಇಲ್ಲಿ ಸಟಿಕ ಸರೋವರ ಅಂತರ್ಗಾಮಿನಿ. ಅಲ್ಲಿ ವಿಶ್ವೇಶ್ವರ. ಇಲ್ಲಿ ಅಗಸ್ತ್ಯೇಶ್ವರ. ಈ ಅಗಸ್ತ್ಯೇಶ್ವರನ ಶಿರದ ಮೇಲೆ ತೀರ್ಥ ಉದ್ಭವವಾಗಿದೆ. ಅಲ್ಲಿಂದಲೇ ತೆಗೆದು ಎಲ್ಲರಿಗೂ ತೀರ್ಥ ಕೊಡಲಾಗುತ್ತದೆ. ಅಲ್ಲಿ ವಟವೃಕ್ಷ. ಇಲ್ಲಿ ಬ್ರಹ್ಮ ಅಶ್ವತ್ಥ. ಹೊಳೆಯಿಂದ ಆಚೆ ಸಂಗಮದ ಬಳಿ ಬ್ರಹ್ಮ ಹಾಕಿದ ಅರಳೀಮರವಿದೆ. ಕಾಶಿ ಕ್ಷೇತ್ರಕ್ಕೂ ಇಲ್ಲಿಗೂ ಒಂದು ಗುಲಗಂಜಿ ತೂಕ ವ್ಯತ್ಯಾಸ. ಹೀಗಾಗಿ ಗುಂಜಾ ನರಸಿಂಹ ಎಂಬ ಹೆಸರು. ತೊಡೆಯ ಮೇಲೆ ಲಕ್ಷ್ಮೀದೇವಿ ಆಸೀನಳಾಗಿರುವುದರಿಂದ ಲಕ್ಷ್ಮೀನರಸಿಂಹ ಎಂದೂ ಕರೆಯುತ್ತಾರೆ.

ಪೂರ್ವದಲ್ಲಿ ಇದು ದಟ್ಟ ಅರಣ್ಯ ಪ್ರದೇಶ. ಅಗಸ್ತ್ಯ ಮಹರ್ಷಿಗಳು ಇಲ್ಲಿಗೆ ತಪಸ್ಸಿಗೆ ಬರುತ್ತಾರೆ. ಆಂಜನೇಯನನ್ನು ಪ್ರಾರ್ಥಿಸಿಕೊಂಡು “ಇಲ್ಲಿನ ವಾತಾವರಣ ಚೆನ್ನಾಗಿದೆ, ಇಲ್ಲಿ ಒಂದು ಲಿಂಗವನ್ನು ಪ್ರತಿಷ್ಠಾಪನೆ ಮಾಡಬೇಕು” ಎನ್ನುತ್ತಾರೆ. ಕಾಶಿಗೆ ಹೋಗಿ ಲಿಂಗ ತರಲು ಆಂಜನೇಯನಿಗೆ ಸೂಚಿಸುತ್ತಾರೆ. ಅವನು ಕಾಶಿ ಯಿಂದ ಲಿಂಗ ತರುವ ವೇಳೆಗೆ ಇಲ್ಲಿ ಮುಹೂರ್ತ ಮೀರುವ ಸಂದರ್ಭ. ಆಗ ಅಗಸ್ತ್ಯರು ಮರಳಿನಲ್ಲಿ ಒಂದು ಮೂರ್ತಿ ಮಾಡಿ ಆ ಶುಭ ಮುಹೂರ್ತದಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡುತ್ತಾರೆ. ಆಗ ಆಂಜನೇಯ ಅಲ್ಲಿಗೆ ಬರುತ್ತಾನೆ. ತಾನು ತಂದ ಮೂರ್ತಿ ವ್ಯರ್ಥವಾಯಿತೆಂದು ಅವನು ತನ್ನ ಬಾಲದಿಂದ ಮರಳಿನ ಲಿಂಗಕ್ಕೆ ಹೊಡೆಯುತ್ತಾನೆ. ಆಗ ಅದು ಮೂರು ಭಾಗವಾಗುತ್ತದೆ. ಆಗ ಅಗಸ್ತ್ಯರು ಆಂಜನೇಯನನ್ನು ಸಮಾಧಾನ ಮಾಡುತ್ತಾರೆ, “ನೀನು ತಂದಿರುವ ಲಿಂಗವನ್ನು ಊರ ಬಾಗಿಲಿನಲ್ಲಿ ಪ್ರತಿಷ್ಠಾಪಿಸೋಣ. ಇದರಿಂದ ಇಲ್ಲಿಗೆ ಬರುವ ಭಕ್ತರು ಮೊದಲು ಹನುಮಂತೇಶ್ವರನ ದರ್ಶನ ಮಾಡಿ ಅನಂತರ ಇಲ್ಲಿಗೆ ಬಂದರೆ ಹೆಚ್ಚು ಫಲ ಸಿಗುತ್ತದೆ.” ಈ ರೀತಿ ಊರ ಬಾಗಿಲಿನಲ್ಲಿ ಅದನ್ನು ಪ್ರತಿಷ್ಠಾಪಿಸಿ ಅದಕ್ಕೆ ಹನುಮಂತೇಶ್ವರ ಎಂದು ಕರೆಯುತ್ತಾರೆ. ಅಗಸ್ತ್ಯರು ಪ್ರತಿಷ್ಠಾಪಿಸಿದ್ದರಿಂದ ಇಲ್ಲಿರುವ ಲಿಂಗಕ್ಕೆ ಅಗಸ್ತ್ಯೇಶ್ವರ ಎಂಬ ಹೆಸರು.

ಮೇಲುಕೋಟೆಯಲ್ಲಿ ವೈರಮುಡಿಯಾದ ಐದನೇ ದಿನಕ್ಕೆ ಇಲ್ಲಿ ರಥೋತ್ಸವ. ಶ್ರಾವಣ ಮಾಸದ ಎಲ್ಲ ಶನಿವಾರದಂದೂ ವಿಶೇಷ ಅಭಿಷೇಕ. ನರಸಿಂಹ ಜಯಂತಿ, ಪವಿತ್ರೋತ್ಸವ ಮುಖ್ಯವಾದವು. ಪ್ರತಿ ಮಂಗಳವಾರ ಅಭಿಷೇಕ ಉಂಟು.

ದರ್ಶನ ಸಮಯ : ಬೆಳಗ್ಗೆ 8:30 ರಿಂದ ಮಧ್ಯಾಹ್ನ 1:00 ಗಂಟೆ ಮತ್ತು ಸಂಜೆ 5:30 ರಿಂದ 8:00 ರವರೆಗೆ. ವಿಶೇಷ ದಿನಗಳಂದು ದೇವಸ್ಥಾನ ಇನ್ನೂ ಹೆಚ್ಚು ಸಮಯ ತೆಗೆದಿರುತ್ತದೆ. ಮೈಸೂರಿನಿಂದ 32 ಕಿ.ಮೀ. ಬಸ್ ಅಥವಾ ಖಾಸಗಿ ವಾಹನಗಳ ಮೂಲಕ ಇಲ್ಲಿಗೆ ತಲಪಬಹುದು.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ನರಸೀಪುರ ಪುರವರಾಧೀಶ್ವರ ಶ್ರೀ ಲಕ್ಷ್ಮೀ ದೇವೀ ಸಮೇತ ಶ್ರೀ ನರಸಿಂಹ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಶ್ರೀಮತ್ ಪಯೋನಿಧಿ ನಿಕೇತನ ಚಕ್ರಪಾಣೇ ಭೋಗೀಂದ್ರ ಭೋಗ ಮಣಿರಂಜಿತ ಪುಣ್ಯಮೂರ್ತೇ | ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ | ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ||

## 8. ಮೈಸೂರು ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ರಾಮ ದೇವಾಲಯ ಚುಂಚನಕಟ್ಟೆ (ಎಂಡಿಕೆ) ಕೃಷ್ಣರಾಜ ನಗರ
2. ಶ್ರೀ ಅರ್ಕೇಶ್ವರ ದೇವಸ್ಥಾನ ಹಳೇ ಯೆಡತೋರೆ ಕೃಷ್ಣರಾಜ ನಗರ
3. ಶ್ರೀ ಪಾದ ತೀರ್ಥ ದೇವಸ್ಥಾನ ಸಾಲಿಗ್ರಾಮ ಕೃಷ್ಣರಾಜ ನಗರ
4. ಶ್ರೀ ಯೋಗನರಸಿಂಹ ದೇವಸ್ಥಾನ ಸಾಲಿಗ್ರಾಮ ಕೃಷ್ಣರಾಜ ನಗರ
5. ಶ್ರೀ ಯೋಗಾನಂದೇಶ್ವರ ಮಠ, ಯೆಡತೊರೆ, ಕೃಷ್ಣರಾಜ ನಗರ
6. ಶ್ರೀ ನಂದಿ ದೇವಸ್ಥಾನ ಬಸವಣ್ಣ ಮೈಸೂರು
7. ಶ್ರೀ ಪರಕಾಲ ಮಠ, ಮೈಸೂರು
8. ಶ್ರೀ ಜನಾರ್ಧನ ಸ್ವಾಮಿ ದೇವಾಲಯ ಬೆಲಗೋಳ ಮೈಸೂರು
9. ಶ್ರೀ ಯೋಗ ನರಸಿಂಹ ದೇವಸ್ಥಾನ ಬೆಲಗೋಳ ಮೈಸೂರು
10. ಶ್ರೀ ಚಾಮುಂಡೇಶ್ವರಿ ದೇವಸ್ಥಾನ ಚಾಮುಂಡಿ ಬೆಟ್ಟ (ಎಂಡಿಕೆ) (ಎ) ಮೈಸೂರು
11. ಶ್ರೀ ಮಹಾಬಲೇಶ್ವರ ದೇವಸ್ಥಾನ ಚಾಮುಂಡಿ ಬೆಟ್ಟ ಮೈಸೂರು
12. ಶ್ರೀ ಲಕ್ಷ್ಮೀಕಾಂತ ದೇವಸ್ಥಾನ ಹೆಬ್ಬಾಳು ಮೈಸೂರು ತಾಲ್ಲೂಕು
13. ಶ್ರೀ ಚಂದ್ರ ಮೌಳೀಶ್ವರ ದೇವಸ್ಥಾನ ಸಿದ್ದಲಿಂಗಪುರ ಮೈಸೂರು ತಾಲ್ಲೂಕು
14. ಶ್ರೀ ಅನಕನಾಥೇಶ್ವರ ದೇವಸ್ಥಾನ ವಾಜಮಂಗಲ ಮೈಸೂರು ತಾಲ್ಲೂಕು
15. ಶ್ರೀ ವರದರಾಜಸ್ವಾಮಿ ದೇವಸ್ಥಾನ ವರಕೋಡು ಮೈಸೂರು ತಾಲ್ಲೂಕು
16. ಶ್ರೀ ನಗರೇಶ್ವರ, ಶ್ರೀ ಲಕ್ಷ್ಮೀಕಾಂತ ದೇವಸ್ಥಾನಗಳು, ಹೆಡತಲೆ, ನಂಜನಗೂಡು ತಾಲ್ಲೂಕು
17. ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ ಹೆಮ್ಮರಗಾಲ ನಂಜನಗೂಡು ತಾಲ್ಲೂಕು
18. ಶ್ರೀ ಲಕ್ಷ್ಮೀಕಾಂತ ದೇವಸ್ಥಾನ ಕಳಲೆ ನಂಜನಗೂಡು ತಾಲ್ಲೂಕು
19. ಶ್ರೀ ಸೋಮೇಶ್ವರ ದೇವಸ್ಥಾನ ಕಳಲೆ ನಂಜನಗೂಡು ತಾಲ್ಲೂಕು

20. ಶ್ರೀ ಕ್ಷೇತ್ರ ಸುತ್ತೂರು ಮಠ, ಸುತ್ತೂರು ಗ್ರಾಮ ನಂಜನಗೂಡು ತಾಲ್ಲೂಕು
21. ಶ್ರೀ ಕ್ಷೇತ್ರ ದೇವನೂರು ಮಠ, ದೇವನೂರು ಗ್ರಾಮ ನಂಜನಗೂಡು ತಾಲ್ಲೂಕು
22. ಶ್ರೀ ಮಲ್ಲಿಕರ್ಜುನ ದೇವಸ್ಥಾನ ಬೆಟ್ಟದಪುರ (ಎಎಸ್ಐ) ಪಿರಿಯಾಪಟ್ಟಣ ತಾಲ್ಲೂಕು
23. ಶ್ರೀ ವರದರಾಜ ಸ್ವಾಮಿ ದೇವಸ್ಥಾನ, ಹಮ್ಮಿಗೇ, ಟಿ ನರಸೀಪುರ ತಾಲ್ಲೂಕು
24. ಶ್ರೀ ಸಂತಾನ ಗೋಪಾಲ ಕೃಷ್ಣ ಸ್ವಾಮಿ ದೇವಾಲಯ, ಕೃಷ್ಣಪುರ, ಟಿ ನರಸೀಪುರ ತಾಲ್ಲೂಕು
25. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ಮುಡುಕುತೊರೆ, (ಎಂಡಿಕೆ) ಟಿ ನರಸೀಪುರ ತಾಲ್ಲೂಕು
26. ಶ್ರೀ ವೈದ್ಯನಾಥೇಶ್ವರ ದೇವಾಲಯಗಳ ಗುಂಪು, ತಲಕಾಡು, (ಎಂಡಿಕೆ) ಟಿ ನರಸೀಪುರ ತಾಲ್ಲೂಕು
27. ಶ್ರೀ ಗುಂಜ ನರಸಿಂಹ, ಶ್ರೀ ಅಗಸ್ಥೇಶ್ವರ, ಶ್ರೀ ಬಿಕ್ಷೇಶ್ವರ, ದೇವಾಲಯ ಶ್ರೀ ಆನಂದೇಶ್ವರ, ಟಿ ನರಸೀಪುರ, ಟಿ ನರಸೀಪುರ ತಾಲ್ಲೂಕು
28. ಶ್ರೀ ಕೇಶವ ದೇವಸ್ಥಾನ, ಸೋಮನಾಥಪುರ, ಟಿ ನರಸೀಪುರ ತಾಲ್ಲೂಕು
29. ಶ್ರೀ ಅರ್ಕೇಶ್ವರ ದೇವಸ್ಥಾನ, ವಿಜಯಪುರ, ಟಿ ನರಸೀಪುರ ತಾಲ್ಲೂಕು

5. ಕೇಂದ್ರ - ಚಿಕ್ಕಮಗಳೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಹಿರೇಮಗಳೂರು, ಬಾಬಾಬುಡನಗಿರಿ / ದತ್ತಾತ್ರೇಯಪೀಠ, ಮಾಣಿಕ್ಯಧಾರಾ ವಾಟರ್ ಫಾಲ್ಸ್, ರತ್ನಗಿರಿ ಬೋರೆ(ಮ.ಗಾಂ. ಪಾರ್ಕ್)

## 9. ಮೈಸೂರು ಜಿಲ್ಲೆಯ ಪ್ರಯಾಣ ಮಾರ್ಗ ಸೂಚಿ

1. ಕೇಂದ್ರ - ಮೈಸೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಸೋಮನಾಥಪುರ >> ಟಿ ನರಸೀಪುರ >> ತಲಕಾಡು >> ಮುಡುಕುತೊರೆ >> ಶಿವನಸಮುದ್ರ >> ಮೈಸೂರು (160 ಕಿ.ಮೀ)
2. ಕೇಂದ್ರ - ಮೈಸೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ನಂಜಂಗುಡು >> ಕಳಲೆ ಲಕ್ಷ್ಮೀಕಾಂತ ದೇವಸ್ಥಾನ >> ಗೋಪಾಲಸ್ವಾಮಿ ಬೆಟ್ಟ >> ಬಂಡೀಪುರ ರಾಷ್ಟ್ರೀಯ ಉದ್ಯಾನ >> ಮೈಸೂರು (180 ಕಿ.ಮೀ)
3. ಕೇಂದ್ರ - ಮೈಸೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಸುವರ್ಣ ದೇವಾಲಯ >> ಕಾವೇರಿ ನಿಸರ್ಗಧಾಮ >> ದುಬಾರೆ ಆನೆ ಶಿಬಿರ >> ಮೈಸೂರು (220 ಕಿ.ಮೀ)
4. ಕೇಂದ್ರ - ಮೈಸೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಬಾಗಮಂಡಲ >> ತಲಕವೇರಿ >> ರಾಜಸೀಟ >> ಓಂಕಾರೇಶ್ವರ ದೇವಸ್ಥಾನ >> ಕೊಡಗು ಕೋಟೆ >> ಮೈಸೂರು (340 ಕಿ.ಮೀ)
5. ಕೇಂದ್ರ - ಮೈಸೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಮಲೆ ಮಹಾದೇಶ್ವರ ಬೆಟ್ಟಗಳು >> ಬಿಳಿಗಿರಿರಂಗ ಬೆಟ್ಟ >> ಮೈಸೂರು (320 ಕಿ.ಮೀ)
6. ಕೇಂದ್ರ - ಮೈಸೂರು, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಶ್ರೀರಂಗಪಟ್ಟಣ >> ರಂಗನತಿಟ್ಟು ಪಕ್ಷಿಧಾಮ >> ಮೆಲುಕೋಟೆ >> ಮೈಸೂರು (120 ಕಿ.ಮೀ)
7. ಕೇಂದ್ರ - ಮೈಸೂರು ಸ್ಥಳೀಯ, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 9:00, ವೀಕ್ಷಣೆ - ಚಾಮುಂಡಿ ಬೆಟ್ಟ, ನಂದಿ >> ಮರಳು ಶಿಲ್ಪಕಲೆ ವಸ್ತುಸಂಗ್ರಹಾಲಯ >> ಕಾರಂಜಿ ಸರೋವರ >> ಅವಧೂತ ದತ್ತ ಪೀಠ >> ಮೈಸೂರು ಅರಮನೆ >> ಕೆ ಆರ್ ಎಸ್ ಹಿನ್ನೀರಿನ ದೇವಾಲಯ >> ಬೃಂದಾವನ ಉದ್ಯಾನಗಳು (ಸಂಜೆ 6.30 ರ ಹೊತ್ತಿಗೆ ತಲುಪುವುದು)
8. ಕೇಂದ್ರ - ಮೈಸೂರು ಸ್ಥಳೀಯ, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಎಡಮುರಿ ಜಲಪಾತ >> ಬಲಮುರಿ (ಬೋಟಿಂಗ್, ಈಜು) >> ರೈಲ್ವೆ ಮ್ಯೂಸಿಯಂ >> ವ್ಯಾಕ್ಸ್ ಮ್ಯೂಸಿಯಂ >> ಜಗನ್ಮೋಹನ ಅರಮನೆ - ಆರ್ಟ್ ಗ್ಯಾಲರಿ >> ಮೈಸೂರು ಮೃಗಾಲಯ

# 6. ಚಾಮರಾಜನಗರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಚಾಮರಾಜನಗರ ಒಂದು ದಕ್ಷಿಣಒಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಮೈಸೂರು, ಮಂಡ್ಯ ರಾಮನಗರ ಜಿಲ್ಲೆಗಳು ಹಾಗೂ ತಮಿಳುನಾಡು ಸುತ್ತುವರಿದಿವೆ. ಚಾಮರಾಜ ನಗರ ಪಟ್ಟಣವು ಜಿಲ್ಲಾ ಕೇಂದ್ರ. ಚಾಮರಾಜ ನಗರ, ಗುಂಡ್ಲುಪೇಟೆ, ಹನೂರು, ಕೊಳ್ಳೇಗಾಲ, ಯಳಂದೂರು ಎಂಬ 5 ತಾಲ್ಲೂಕುಗಳನ್ನು ಹೊಂದಿದೆ.

ಕಾವೇರಿ, ಸುವರ್ಣಾವತಿ, ಚಿಕ್ಕಹೊಳೆ ನದಿಗಳು ಚಾಮರಾಜನಗರ ಜಿಲ್ಲೆಯಲ್ಲಿ ಹರಿಯುತ್ತವೆ.

ಹೊಗೆನಕಲ್ಲು ಜಲಪಾತ, ಗಗನಚುಕ್ಕಿ ಭರಚುಕ್ಕಿ ಜಲಪಾತ, ಗುಂಡಾಲ್ ಅಣೆಕಟ್ಟು, ಸುವರ್ಣಾವತಿ ಅಣೆಕಟ್ಟು, ಕೆ ಗುಡಿ ವನ್ಯಜೀವಿ ವೀಕ್ಷಣೆ, ಮುಂತಾದವು ಚಾಮರಾಜನಗರ ಜಿಲ್ಲೆಯ ಪ್ರವಾಸೀ ಆಕರ್ಷಣೆಗಳು.

ಶ್ರೀಗಂಧದ ಕೆತ್ತನೆಗಳು, ಅರಣ್ಯ ಉತ್ಪನ್ನಗಳಾದ ಜೇನುತುಪ್ಪ, ಕಳಲೆ, ಸೀಗೆಪುಡಿ, ಮುಂತಾದವನ್ನು ಖರೀದಿಸಬಹುದು.

ದಕ್ಷಿಣಕರ್ನಾಟಕದ ಅಡುಗೆ ಸವಿಯಬಹುದು.


Fig- 1
CHAMARAJANAGARA DISTRICT
KARNATAKA
N
BANGALORE
RURAL
DISTRICT
MANDYA
DISTRICT
TAMIL NADU STATE
KOLLEGAL
MYSORE DISTRICT
YELANDUR
CHAMARAJNAGAR
GUNDALPET
KERALA STATE
TAMIL NADU STATE
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters
Hilly area

## 1. ಶ್ರೀ ಮಲೆ ಮಹದೇಶ್ವರ ಸ್ವಾಮಿ ದೇವಸ್ಥಾನ, ಮಲೆ ಮಹದೇಶ್ವರ ಬೆಟ್ಟ,

ಮಲೆ ಮಹದೇಶ್ವರ ಬೆಟ್ಟ ದಕ್ಷಿಣ ಕರ್ನಾಟಕದ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲೂಕಿನಲ್ಲಿರುವ ಒಂದು ಯಾತ್ರಾಸ್ಥಳವಾಗಿದೆ. ಇದು ಮೈಸೂರುನಿಂದ ಸುಮಾರು 150 ಕಿ.ಮೀ ಮತ್ತು ಬೆಂಗಳೂರಿನಿಂದ 210 ಕಿ.ಮೀ, ಚಾಮರಾಜನಗರದಿಂದ 80 ಕಿಮೀ ದೂರದಲ್ಲಿದೆ. ಶ್ರೀ ಪುರುಷ ಮಹಾದೇಶ್ವರನ ಪ್ರಾಚೀನ ಮತ್ತು ಪವಿತ್ರ ದೇವಾಲಯ ಅತ್ಯಂತ ಜನಪ್ರಿಯ ಶೈವ ಯಾತ್ರಾ ಕೇಂದ್ರ ಮತ್ತು ಅತ್ಯಂತ ಶಕ್ತಿಶಾಲಿ ಶಿವ ದೇವಸ್ಥಾನ. ಇದು ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳಿಂದ ಲಕ್ಷಾಂತರ ಯಾತ್ರಿಗಳನ್ನು ಸೆಳೆಯುತ್ತದೆ. ದಟ್ಟ ಕಾಡಿನ ಮಧ್ಯೆ ಈ ದೇವಾಲಯವು ಯಾತ್ರಾರ್ಥಿಗಳು ಮಾತ್ರವಲ್ಲದೆ ಪ್ರಕೃತಿ ಪ್ರಿಯರನ್ನು ಆಕರ್ಷಿಸುತ್ತದೆ. ಬೆಟ್ಟದ ಎತ್ತರ ಸಮುದ್ರ ಮಟ್ಟದಿಂದ ಸುಮಾರು 3000 ಅಡಿಗಳು.

ಉತ್ಸವಗಳು - ಮಹಾನವಮಿ (ದಸರಾ), ದೀಪಾವಳಿ, ದೀಪೋತ್ಸವ, ಶಿವರಾತ್ರಿ, ಯುಗಾಧಿ

ಭಕ್ತರಿಗಾಗಿ ಸೌಲಭ್ಯಗಳು - ದಾಸೋಹ, ವಸತಿ ಗೃಹಗಳು, ಮುಡಿ ಸೇವೆ, ಪಾದರಕ್ಷೆ ಬಿಡುವ ಸ್ಥಳ, ವಾಹನ ನಿಲುಗಡೆ, ಶೌಚಾಲಯಗಳು, ಕುಡಿಯುವನೀರು, ಪೆಟ್ರೋಲ್ ಬಂಕು,

ದಾಸೋಹ ಸಮಯ - ಬೆಳಿಗ್ಗೆ 07:30 ರಿಂದ 10:30, ಮಧ್ಯಾಹ್ನ 12:30 ರಿಂದ 03:00, ರಾತ್ರಿ 07:00 ರಿಂದ 10.30 ರ ವರೆಗೆ

## 2. ಶ್ರೀ ಬಿಳಿಗಿರಿ ರಂಗನಾಥಸ್ವಾಮಿ ದೇವಸ್ಥಾನ, ಬಿಳಿಗಿರಿ ರಂಗನಬೆಟ್ಟ,

ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕು ನಲ್ಲಿರುವ ಬಿಳಿಗಿರಿರಂಗನಬೆಟ್ಟವನ್ನು 'ಬಿಳಿಗಿರಿ ಬೆಟ್ಟ', 'ಬಿಳಿಕಲ್ಲು ಬೆಟ್ಟ', 'ಶ್ವೇತಾದ್ರಿ ಬೆಟ್ಟ' ಎಂದೂ ಹಾಗೂ ಗಂಗರ ಕಾಲದಲ್ಲಿ 'ಗಜಾರಣ್ಯ' ಎಂದೂ ಕರೆಯುತ್ತಿರುವುದಾಗಿ ತಿಳಿದುಬಂದಿರುತ್ತದೆ. ಈ ಬೆಟ್ಟವು ಸಮುದ್ರ ಮಟ್ಟದಿಂದ 5091 ಅಡಿ ಎತ್ತರವಿದ್ದು, ಪರ್ವತ ಶ್ರೇಣಿಗಳಿಂದ ಕೂಡಿರುತ್ತದೆ.

ಶ್ರೀ ಬಿಳಿಗಿರಿರಂಗನಾಥಸ್ವಾಮಿ ವಿಗ್ರಹವು 5.5 ಅಡಿ ಎತ್ತರವಿದ್ದು, ರಂಗನಾಥಸ್ವಾಮಿ ನಿಂತಿರುವ ಮೂರ್ತಿಯಾಗಿರುತ್ತದೆ. ಇದನ್ನು ವಶಿಷ್ಠ ಮಹಾಮುನಿಗಳು ಸ್ಥಾಪಿಸಿರುವುದಾಗಿ ನಂತರ ವಿಷ್ಣುವರ್ಧನ ರಾಜನು ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದಾಗಿ ಪ್ರತೀತಿ ಇದೆ. ತ್ರೇತಾಯುಗದಲ್ಲಿ ಸೀತಾನ್ವೇಷಣಾ ಕಾಲದಲ್ಲಿ ಶ್ರೀರಾಮ-ಲಕ್ಷ್ಮಣರು ಇಲ್ಲಿಗೆ ಬಂದು ಶ್ವೇತಾದ್ರಿಯನ್ನು ಪೂಜಿಸಿದ್ದುದಾಗಿಯೂ ಶ್ವೇತಾಚಲ ಮಹಾತ್ಮೆಯ 3ನೇ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟಿರುತ್ತದೆ. ಸ್ವಾಮಿಯ ಸನ್ನಿಧಿಯ ಬಲಭಾಗದಲ್ಲಿ ಅಲಮೇಲುರಂಗನಾಯಕಿ ಅಮ್ಮನವರ ದೇವಸ್ಥಾನದವಿದ್ದು, ಇದು ದ್ರಾವಿಡ ಶೈಲಿಯಲ್ಲಿರುತ್ತದೆ.

ಶ್ರೀ ಬಿಳಿಗಿರಿರಂಗನಾಥಸ್ವಾಮಿಗೆ 'ಬಿಳಿಕಲ್ಲು ತಿರುವೆಂಕಟನಾಥ'ನೆಂದು ಮತ್ತೊಂದು ಹೆಸರಿದ್ದು, ಈ ಸ್ವಾಮಿಗೆ ಹದಿನಾರಿನ ಮುದ್ದುರಾಜನು 1667ರಲ್ಲಿ ಹಾಗೂ ದಿವಾನ್ ಪೂರ್ಣಯ್ಯರವರು ದೇವಾಲಯದ ಸೇವೆಗಾಗಿ ಎರಡು ಗ್ರಾಮಗಳನ್ನು ದತ್ತಿ ಬಿಟ್ಟಿರುವುದಾಗಿ ತಿಳಿದುಬಂದಿರುತ್ತದೆ.

ಸ್ಥಳೀಯ ಗ್ರಾಮೀಣ ಜನತೆಯ ಜಾನಪದ ಕಥೆಯ ಪ್ರಕಾರ ಶ್ರೀ ಬಿಳಿಗಿರಿರಂಗನಾಥಸ್ವಾಮಿಯು ಕಾಡಿನ ಸೋಲಿಗ ಜನಾಂಗದ ಕನ್ಯೆಯಾದ 'ಕುಸುಮಬಾಲೆ'ಯನ್ನು ವರಿಸಿದ ಕಾರಣ ಇಲ್ಲಿನ ಸೋಲಿಗ ಜನಾಂಗದವರು ಈಗಲೂ ಸಹ ಶ್ರೀ ಸ್ವಾಮಿಯನ್ನು 'ಬಾವ'ನೆಂದು ಕರೆಯುವ ಪದ್ಧತಿಯೂ ಇರುತ್ತದೆ. ಎರಡು ವರ್ಷಗಳಿಗೊಮ್ಮೆ ಈ ಪ್ರದೇಶದ ಸ್ಥಳೀಯ ಬುಡಕಟ್ಟು ಜನಾಂಗದವರು 1 ಅಡಿ 9 ಇಂಚುಗಳಷ್ಟು ಅಳತೆಯ ದೊಡ್ಡ ಜೋಡಿ ಚರ್ಮದ ಚಪ್ಪಲಿಗಳನ್ನು ರಂಗನಾಥಸ್ವಾಮಿಗೆ ಅರ್ಪಿಸುತ್ತಾರೆ.

ದರ್ಶನ ಸಮಯ - ಬೆಳಿಗ್ಗೆ 7:00 ರಿಂದ ರಾತ್ರಿ 8:00 ರವರೆಗೆ

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಬಿಳಿಗಿರಿ ಪುರವರಾಧೀಶ್ವರ ಶ್ರೀ ಕುಸುಮಬಾಲಿಕಾ ದೇವೀ ಸಮೇತ ಶ್ರೀ ರಂಗನಾಥ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ -

ಬ್ರಹ್ಮಾದಿವಂದ್ಯೇ ಜಗದೇಕವಂದ್ಯೇ ಮುಕುಂದವಂದ್ಯೇ ಸುರನಾಥವಂದ್ಯೇ |
ವ್ಯಾಸಾದಿವಂದ್ಯೇ ಸನಕಾದಿವಂದ್ಯೇ ಶ್ರೀರಂಗವಂದ್ಯೇ ರಮತಾಂಮನೋಮೇ ||

ಉತ್ಸವ/ಜಾತ್ರೆಗಳ ವಿವರ - ಜನವರಿ ಮಾಹೆಯಲ್ಲಿ ಸಂಕ್ರಾಂತಿ ಹಬ್ಬದ ಮಾರನೆ ದಿನ ಚಿಕ್ಕಜಾತ್ರೆಯು (ಚಿಕ್ಕ ರಥೋತ್ಸವ) ಮತ್ತು ಏಪ್ರಿಲ್ ಕೊನೆಯ ವಾರದಲ್ಲಿ ಅಥವಾ ಮೇ ಮೊದಲ ವಾರದಲ್ಲಿ ಬರುವ ಚಿತ್ತಾ ನಕ್ಷತ್ರದ ದಿನ ದೊಡ್ಡಜಾತ್ರೆಯು (ಬ್ರಹ್ಮ ರಥೋತ್ಸವ) ನಡೆಯುತ್ತದೆ. ಇದರ ಪ್ರಯುಕ್ತ ೯ ದಿನ ವೈಖಾನಸಾಗಮ ಪದ್ಧತಿ ಪ್ರಕಾರ ವಿಶೇಷ ಪೂಜಾ ಕಾರ್ಯಗಳು ನಡೆಯುತ್ತದೆ.

ಪ್ರವಾಸಿ ತಾಣಗಳು - ಶ್ರೀ ರಾಘವೇಂದ್ರಸ್ವಾಮಿಗಳ ಮೃತ್ತಿಕ ಬೃಂದಾವನ, ಶ್ರೀ ಗಂಗಾಧರೇಶ್ವರಸ್ವಾಮಿ ದೇವಾಲಯ, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಸ್ವಾಮಿ ನಿರ್ಮಲಾನಂದರ ಆಶ್ರಮ, ದೊಡ್ಡ ಸಂಪಿಗೆ ಮರ,

ವಸತಿ ಸೌಲಭ್ಯಗಳು - ಮುಜರಾಯಿ ಇಲಾಖೆಯ ಬಿಳಿಗಿರಿ ಭವನ, ಲೋಕೋಪಯೋಗಿ ಇಲಾಖೆಯ ಅತಿಥಿ ಗೃಹ, ಅರಣ್ಯ ಇಲಾಖೆಯ ಅತಿಥಿ ಗೃಹ, ತೋಟಗಾರಿಕೆ ಇಲಾಖೆಯ ಅತಿಥಿ ಗೃಹ ಹಾಗೂ ಖಾಸಗಿ ಅತಿಥಿ ಗೃಹಗಳು ಇರುತ್ತವೆ.

ವಿಶೇಷ ಸೂಚನೆ - ಬಿಳಿಗಿರಿರಂಗನಬೆಟ್ಟ ಅರಣ್ಯ ಪ್ರದೇಶವಾದ್ದರಿಂದ ಸಂಜೆ 6.00 ಗಂಟೆಯಿಂದ ಬೆಳಿಗ್ಗೆ 6.00 ಗಂಟೆಯವರೆಗೆ ವಾಹನ ಸಂಚಾರವನ್ನು ನಿಷೇಧಿಸಿದೆ.

## 3. ಶ್ರೀ ರಂಗನಾಥಸ್ವಾಮಿ ಸಮೂಹ ದೇವಸ್ಥಾನಗಳು, ಶಿವನ ಸಮುದ್ರ,

"ಶಿವನ ಸಮುದ್ರ" ಒಂದು ಚಿಕ್ಕ ಹಳ್ಳಿ ಇದು ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆಯಲ್ಲಿದೆ. ಈ ಚಿಕ್ಕ ಗ್ರಾಮದಲ್ಲಿ ತುಂಬ ದೇವಸ್ಥಾನಗಳಿವೆ. ಪ್ರಸಿದ್ಧಿ ಹೊಂದಿರುವವು ಶ್ರೀ. ರಂಗನಾಥಸ್ವಾಮಿ ದೇವಸ್ಥಾನ, ಶ್ರೀ.ಸೋಮೇಶ್ವರ ಸ್ವಾಮಿ ದೇವಸ್ಥಾನ. ಶಿವನಸಮುದ್ರವು ಮೈಸೂರಿನಿಂದ 85 ಕಿ.ಮೀ ಮತ್ತು ಬೆಂಗಳೂರಿನಿಂದ 115 ಕಿ.ಮೀ. ದೂರದಲ್ಲಿದೆ. ಕಾವೇರಿನದಿಯು ಶಿವನ ಸಮುದ್ರವನ್ನು ಸುತ್ತವರೆದಿರುವುದರಿಂದ ಇದು ಒಂದು ದ್ವೀಪದಂತಿದೆ. ಶ್ರೀರಂಗನಾಥಸ್ವಾಮಿ ದೇವಸ್ಥಾನವನ್ನು ದ್ರಾವಿಡ ಶೈಲಿಯಲ್ಲಿ ಕಟ್ಟಲಾಗಿದೆ. ಶ್ರೀರಂಗಪಟ್ಟಣದ್ವೀಪದಲ್ಲಿರುವ ಮೂರ್ತಿಯನ್ನು 'ಆದಿರಂಗ'ನೆಂದೂ ಎರಡನೆಯದು ಶಿವನಸಮುದ್ರದ್ವೀಪದಲ್ಲಿರುವ ಮೂರ್ತಿಯನ್ನು 'ಮದ್ಯರಂಗ' ಎಂದೂ ಮತ್ತು ಮೂರನೇ ಮತ್ತು ಕೊನೆಯ ಶ್ರೀರಂಗಂದ್ವೀಪ ತಮಿಳುನಾಡಿನಲ್ಲಿರುವ ಮೂರ್ತಿಯನ್ನು " ಅಂತ್ಯರಂಗ" ಎಂದೂ ಹೆಸರಿಸಿ ಪೂಜಿಸುತ್ತಾರೆ. ಶಿವನಸಮುದ್ರದಲ್ಲಿನ ಮೂರ್ತಿಯನ್ನು ಪ್ರೇಮದಿಂದ " ಮೋಹನರಂಗ, ಜಗನ್ಮೋಹನರಂಗ" ನೆಂದು ಕರೆಯುವುದು ರೂಡಿಯಲ್ಲಿದೆ. ಇಲ್ಲಿನ ರಂಗನಾಥ ದೇಗುಲದಲ್ಲಿ ಸರ್ಪರಾಜನ ಮೂರ್ತಿ, ಪಕ್ಕದಲ್ಲಿ ಆಳ್ವರುಗಳು, ಆಂಜನೇಯ, ಲಕ್ಷ್ಮೀನಾರಾಯಣ, ಎದುರಿನಲ್ಲಿ ಶ್ರೀರಾಮದೇವರ ಮೂರ್ತಿಗಳೆಲ್ಲ ಸ್ಥಾಪಿತವಾಗಿವೆ. ಅಲ್ಲದೆ ವಾಮ ಭಾಗದ ಪ್ರತ್ಯೇಕಗುಡಿಯಲ್ಲಿ ಶ್ರೀ ರಂಗನಾಯಕೀ ಅಮ್ಮನವರ ಮೂರ್ತಿಯು ಅತಿ ಸುಂದರವಾಗಿದೆ.

ಶಿವನಸಮುದ್ರದಲ್ಲಿ ಇರುವ ಇನ್ನೋಂದು ಪುರಾತನ ದೇವಸ್ಥಾನ ಶ್ರೀ ಸೋಮೇಶ್ವರ ದೇವಸ್ಥಾನ. ಈ ದೇವಾಲಯಕ್ಕೆ ಆದಿ ಗುರು ಶಂಕರಾಚಾರ್ಯರು ತಮ್ಮ ತೀರ್ಥಯಾತ್ರಾ ಕಾಲದಲ್ಲಿ ಆಗಮಿಸಿ ಸೋಮೇಶ್ವರನ ಪೂಜೆ ಮಾಡಿ," ಶ್ರೀ ಚಕ್ರ " ಒಂದನ್ನು ಇಲ್ಲಿ ಸ್ಥಾಪನೆ ಮಾಡಿರುತ್ತಾರೆ. ಆಶ್ಚರ್ಯವೆನಿಸಿದ ಸೋಮೇಶ್ವರಲಿಂಗವು ರಂಗನಾಥ ದೇವರಿಗೂ ಮೊದಲು ಸ್ಥಾಪಿತವಾಗಿತ್ತೆಂದೂ, ಸಪ್ತರ್ಷಿಗಳಿಂದ ಪೂಜೆಗೊಂಡುದೆಂದು ಪ್ರತೀತಿ ಇದೆ. ಪಕ್ಕದಲಿ ಪ್ರಸನ್ನ ಮೀನಾಕ್ಷಿ ದೇವಿಯ ದೇವಸ್ಥಾನವಿದೆ.

ದರ್ಶನ ಸಮಯ - ಬೆಳಿಗ್ಗೆ 7.30 ರಿಂದ ರಾತ್ರಿ 8.00 ರವರೆಗೆ

ಉತ್ಸವಗಳು - ಬ್ರಹ್ಮರಥೋತ್ಸವ ಮಾಘ ಮಾಸದಲ್ಲಿ 10 ದಿನಗಳ ಜಾತ್ರೆ, ಶ್ರೀ ಸೋಮೇಶ್ವರ ದೇವಸ್ಥಾನದ ಬ್ರಹ್ಮ ರಥೋತ್ಸವವು ಮಾರ್ಚ ತಿಂಗಳಿನಲ್ಲಿ ನಡೆಯುತ್ತದೆ.

ಪ್ರವಾಸಿ ತಾಣಗಳು - ಗಗನಚುಕ್ಕಿ, ಭರಚುಕ್ಕಿ ಜಲಪಾತಗಳು, ಶಿಂಷಾ ಪವರ್ ಸ್ಟೇಷನ್

## 4. ಚಾಮರಾಜನಗರ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಚಾಮರಾಜೇಶ್ವರಸ್ವಾಮಿ ದೇವಸ್ಥಾನ, ಚಾಮರಾಜನಗರ ಚಾಮರಾಜನಗರ ತಾಲ್ಲೂಕು
2. ಶ್ರೀ ಹಿಮವದ್ ಗೋಪಾಲಸ್ವಾಮಿ ದೇವಸ್ಥಾನ, ಹಿಮವದ್ ಗೋಪಾಲಸ್ವಾಮಿ ಬೆಟ್ಟ, ಗುಂಡ್ಲುಪೇಟೆ ತಾಲ್ಲೂಕು
3. ಶ್ರೀ ವಿಜಯನಾರಾಯಣ ದೇವಸ್ಥಾನ ಗುಂಡ್ಲುಪೇಟೆ, ಗುಂಡ್ಲುಪೇಟೆ ತಾಲ್ಲೂಕು
4. ಶ್ರೀ ಭೂಲಕ್ಷ್ಮಿ ವರಹಸ್ವಾಮಿ ದೇವಸ್ಥಾನ, ಶ್ರೀ ಗೌರೇಶ್ವರಸ್ವಾಮಿ ದೇವಸ್ಥಾನ (ಬಾಳೆ ಮಂಟಪ), ಯೆಲಂದೂರು, ಯೆಲಂದೂರು ತಾಲ್ಲೂಕು
5. ಶ್ರೀ ಅಂಜನೇಯಸ್ವಾಮಿ ದೇವಸ್ಥಾನ, ವಡಗೆರೆ ಗ್ರಾಮ, ಯೆಲಂದೂರು ತಾಲ್ಲೂಕು.
6. ಶ್ರೀ ಮರುಳೇಶ್ವರ ಸ್ವಾಮಿ ದೇವಸ್ಥಾನ, ಶ್ರೀ ಚೌಡೇಶ್ವರಿ ದೇವಸ್ಥಾನ ಮತ್ತು ಶ್ರೀ ಲಕ್ಷ್ಮಿ ನಾರಾಯಣ ಸ್ವಾಮಿ ದೇವಸ್ಥಾನಗಳು ಕೊಳ್ಳೇಗಾಲ, ಕೊಳ್ಳೇಗಾಲ ತಾಲ್ಲೂಕು

# 7. ಮಂಡ್ಯ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಮಂಡ್ಯ ಒಂದು ದಕ್ಷಿಣಬಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಕೊಡಗು, ಹಾಸನ, ಮೈಸೂರು, ಚಾಮರಾಜನಗರ, ರಾಮನಗರ, ತುಮಕೂರು ಜಿಲ್ಲೆಗಳು ಸುತ್ತುವರಿದಿವೆ. ಮಂಡ್ಯ ಪಟ್ಟಣವು ಜಿಲ್ಲಾ ಕೇಂದ್ರ. ಕೃಷ್ಣರಾಜಪೇಟೆ, ಮದ್ದೂರು, ಮಳವಳ್ಳಿ, ಮಂಡ್ಯ, ನಾಗಮಂಗಲ, ಪಾಂಡವಪುರ, ಶ್ರೀರಂಗಪಟ್ಟಣ ಎಂಬ 7 ತಾಲ್ಲೂಕುಗಳನ್ನು ಹೊಂದಿದೆ.

ಕಾವೇರಿ, ಹೇಮಾವತಿ, ಲೋಕಪಾವನಿ, ಲಕ್ಷ್ಮಣತೀರ್ಥ, ಶಿಂಷಾ, ವೀರವೈಷ್ಣವಿ ನದಿಗಳು ಜಿಲ್ಲೆಯಲ್ಲಿ ಹರಿಯುತ್ತವೆ.

ಮಂಡ್ಯವು ಸಕ್ಕರೆನಾಡು, ಮುಂತಾದವು ಈ ಜಿಲ್ಲೆಯ ವೈಶಿಷ್ಟ್ಯಗಳು.

ದಕ್ಷಿಣ ಕರ್ನಾಟಕ ಪಾಕಪದ್ಧತಿಯ ಆಹಾರಗಳು. ಸಾಂಪ್ರದಾಯಿಕ ಖಾದ್ಯವೆಂದರೆ ರಾಗಿ ಮುದ್ದೆ. ಸೇವಿಸಬೇಕಾದ ಇತರ ಭಕ್ಷ್ಯಗಳಲ್ಲಿ ಮದ್ದೂರುವಡಾ, ಬೆಣ್ಣೆ ದೋಸೆ, ಅಕ್ಕಿ ರೋಟಿ ಮತ್ತು ರಾಗಿ ರೋಟಿ ಸೇರಿವೆ. ಅಲ್ಲದೆ, ಬಿಸಿ ಬೇಳೆ ಭಾತ, ಕೇಸರಿ ಭಾತ ಮತ್ತು ವಾಂಗಿ ಭಾತ ನಂತಹ ಹಲವಾರು ಬಗೆಯ ಅಕ್ಕಿ ಭಕ್ಷ್ಯಗಳಿವೆ.

ರಂಗನತಿಟ್ಟು ಪಕ್ಷಿಧಾಮ, ಕೊಕ್ಕರೆಬೆಳ್ಳೂರು ಪಕ್ಷಿಧಾಮ, ಕುಂತಿ ಬೆಟ್ಟ ಚಾರಣ, ಬಲಮುರಿ ಜಲಪಾತ, ಹೇಮಗಿರಿ ಜಲಪಾತ, ಶಿಂಷಾ ಜಲಪಾತ, ಸತ್ಯಾಗ್ರಹ ಸೌಧ, ಶಿವಪುರ, ಆದಿಚುಂಚನಗಿರಿ ನವಿಲು ಅಭಯಾರಣ್ಯ, ಮುಂತಾದವು ಮಂಡ್ಯ ಜಿಲ್ಲೆಯ ಪ್ರವಾಸೀ ಆಕರ್ಷಣೆಗಳು.


MANDYA DISTRICT
KARNATAKA
N
HASSAN DISTRICT
TUMKUR DISTRICT
BANGALORE RURAL DISTRICT
MYSORE DISTRICT
CHAMARAJANAGAR DISTRICT
NAGAMANGALA
KRISHNARAJPET
MADDUR
MANDYA
PANDAVAPURA
SRIRANGAPATTANA
MALAVALLI
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters

## 1. ನಿಮಿಷಾಂಬಾ ದೇವಸ್ಥಾನ ಶ್ರೀರಂಗಪಟ್ಟಣ

ಕರ್ನಾಟಕ ರಾಜ್ಯ ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ಐತಿಹಾಸಿಕ ಪುರಾಣ ಪ್ರಸಿದ್ಧ ಯಾತ್ರಾ ಸ್ಥಳ ಹಾಗೂ ಪ್ರವಾಸಿ ತಾಣವಾಗಿದೆ. ಶ್ರಿರಂಗಪಟ್ಟಣದಿಂದ 3 ಕಿ.ಮೀ ದೂರದಲ್ಲಿ ಗಂಜಾಂ ಗ್ರಾಮದ ಕಾವೇರಿ ನದಿ ತೀರದಲ್ಲಿ ಶ್ರೀನಿಮಿಷಾಂಬಾ ದೇವಸ್ಥಾನವಿದೆ. ಈ ದೇವಸ್ಥಾನ ಆಗಮೋಕ್ತ ರೀತ್ಯಾ ನಿರ್ಮಾಣವಾಗಿದ್ದು ಶಿವಪಂಚಾಯತನ ಕ್ರಮದಲ್ಲಿ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿ ಸೂರ್ಯದೇವ, ಗಣಪತಿ, ಶ್ರೀಚಕ್ರಸಹಿತ ಶ್ರೀ ನಿಮಿಷಾಂಬಾ ದೇವಿ, ಶ್ರೀ ಮೌಕ್ತಿಕೇಶ್ವರಸ್ವಾಮಿ ಮತ್ತು ಶ್ರೀ ಲಕ್ಷ್ಮಿನಾರಾಯಣ ಸ್ವಾಮಿ ದೇವರುಗಳ ಸನ್ನಿಧಿಗಳಿವೆ.

ತ್ರಿಶೂಲ, ಡಮರು, ಅಭಯ ವರದಗಳಿಂದ ಶೋಭಿಸುವ ಶ್ರೀ ನಿಮಿಂಷಾಭಾ ದೇವಿಯು ಭಕ್ತಜನರ ಕಲ್ಪತರು. ಮುಗುಳುನಗೆ ಸೂಸುವ ಮುಖಮುದ್ರೆ ಏಕಾಸನದಲ್ಲಿ ಕುಳಿತಿರುವ ನಿಮಿಷಾಂಬಾ ಶ್ರೀಚಕ್ರಾಂಕಿತೆ. ಎದುರಿನಲ್ಲಿರುವ ಶ್ರೀ ಚಕ್ರವು ಅಷ್ಟೇ ಪುರಾತನವಾಗಿರುವುದು ಶ್ರೀಕ್ಷೇತ್ರದ ವಿಶೇಷವು ಆಗಿದೆ. ಭೂ ಪ್ರಸ್ತಾರ, ಕೃಷ್ಣಶಿಲೆಯಲ್ಲಿ ಕೆತ್ತಲ್ಪಟ್ಟ ಶ್ರೀಚಕ್ರವು ಏಕಮೇವ ಅದ್ವಿತೀಯ ಎನಿಸಿಕೊಂಡಿದೆ. ಶ್ರೀಚಕ್ರದ ಎಲ್ಲೆಡೆ ದಳಗಳಲ್ಲಿ ತ್ರಿಕೋಣಗಳಲ್ಲಿ, ಭವನಗಳಲ್ಲಿ ಇರುವ ಬೀಜಾಕ್ಷರಗಳು ಜಗದಾಂಬೆ ಶ್ರೀನಿಮಿಷಾಂಬಾ ದೇವಿಯ ಪ್ರಸನ್ನತೆಗೆ ಕಾರಣ.

ದರ್ಶನ ಸಮಯ - ಬೆಳಿಗ್ಗೆ 6:30 ರಿಂದ ರಾತ್ರಿ 8:30 ರವರೆಗೆ

ವಿಶೇಷ ಉತ್ಸವಗಳು - ನವರಾತ್ರಿ, ವರ್ಧಂತಿ ಮಹೋತ್ಸವ, ದುರ್ಗಾ ಹೋಮ, ಪ್ರತಿ ಪೂರ್ಣಿಮೆಯಂದು ಅನ್ನ ದಾಸೋಹ.

ವಿಶೇಷ ಸೇವೆಗಳು - ದುರ್ಗಾಸಪ್ತಶತೀ ಪಾರಾಯಣ, ಏಕಾದಶವಾರ ರುದ್ರಾಭಿಷೇಕ, ಮಹಾ ನೈವೇದ್ಯ ಸೇವೆಗಳು, ಚಂಡಿಕಾ ಹೋಮ

ಪ್ರವಾಸಿ ತಾಣಗಳು - ಕಾವೇರಿ ಸಂಗಮ, ಗೋಸಾಯಿಘಾಟ್, ರಂಗನತಿಟ್ಟು ಪಕ್ಷಿಧಾಮ, ಕರಿಘಟ್ಟ, ಬಲಮುರಿ

ಪಶ್ಚಿಮವಾಹಿನಿ - ಕಾವೇರಿ ನದಿಯ ಸಂಗಮವಾಗಿರುವ ಈ ಸ್ಥಳದಲ್ಲಿ ಚಿತಾಭಸ್ಮವನ್ನು ವಿಸರ್ಜಿಸುತ್ತಾರೆ ಮತ್ತು ಪಿತೃಕಾರ್ಯಗಳನ್ನು ನೆರವೇರಿಸುತ್ತಾರೆ. ಇಲ್ಲಿ ಸ್ನಾನದ ಘಟ್ಟಗಳು ಮತ್ತು ಧರ್ಮಶಾಲೆಗಳು

## 2. ರಂಗನಾಥ ದೇವಸ್ಥಾನ ಶ್ರೀರಂಗಪಟ್ಟಣ

ಶ್ರೀರಂಗಪಟ್ಟಣವು ಮಂಡ್ಯ ಜಿಲ್ಲೆಗೆ ಸೇರಿದ ಒಂದು ತಾಲ್ಲೂಕು ಕೇಂದ್ರವಾಗಿದ್ದು, ಜಿಲ್ಲಾ ಕೇಂದ್ರ ಮಂಡ್ಯ ನಗರದಿಂದ 28 ಕಿ.ಮಿ. ದೂರದಲ್ಲಿ ಮೈಸೂರಿಗೆ ಹೋಗುವ ರಸ್ತೆಯಲ್ಲಿದೆ. ಪ್ರಸಿದ್ಧ ಮೈಸೂರು ನಗರದಿಂದ ಶ್ರೀರಂಗಪಟ್ಟಣಕ್ಕೆ ಕೇವಲ 16 ಕಿ.ಮಿ ದೂರ ಮಾತ್ರ ಹಾಗೂ ಕರ್ನಾಟಕದ ರಾಜಧಾನಿ ಬೆಂಗಳೂರಿಗೆ 125 ಕಿ.ಮೀ ದೂರದಲ್ಲಿದೆ.

ಶ್ರೀರಂಗಪಟ್ಟಣದ ಅತ್ಯಂತ ಆಕರ್ಷಕ ಪ್ರವಾಸಿ ಸ್ಥಳ ಹಾಗೂ ಪೌರಾಣಿಕ ಕೇಂದ್ರವೆಂದರೆ ಸುಪ್ರಸಿದ್ಧ "ಶ್ರೀರಂಗನಾಥ ಸ್ವಾಮಿಯವರ ದೇವಾಲಯ". ದೇವಾಲಯವು ವಿಶಾಲವಾದ ಪ್ರದೇಶದಲ್ಲಿ ಬಹಳ ವಿಸ್ತಾರವಾಗಿ ಮೂರು ಹಂತದಲ್ಲಿ ನಿರ್ಮಾಣವಾಗಿರುವುದನ್ನು ಕಾಣಬಹುದು. ದೇವಾಲಯದ ಗರ್ಭಗುಡಿಯು ಕ್ರಿ.ಶ 894ರಲ್ಲಿ ಗಂಗರ ಮುಖ್ಯಸ್ಥ ಶ್ರೀ ತಿರುಮಲಯ್ಯ ಎಂಬುವವರಿಂದ ನಿರ್ಮಿಸಲ್ಪಟ್ಟಿತ್ತೆಂದು ತಿಳಿಸುತ್ತದೆ ಇತಿಹಾಸ. ಆನಂತರ ವಿಜಯನಗರದ ಅರಸರ ಕಾಲದಲ್ಲಿ ನವರಂಗ ಮುಖಮಂಟಪ, ದೇವಾಲಯದ ರಾಜಗೋಪುರವು ನಿರ್ಮಾಣವಾಗಿರುವುದಾಗಿ ತಿಳಿದು ಬಂದಿದೆ. ಮೂರನೇ ಹಂತದಲ್ಲಿ ಗರ್ಭಗುಡಿಗೆ ಸುತ್ತು ಶ್ರೀ ವಿಷ್ಣುವಿನ ವಿವಿಧ ಅವತಾರದ ಸುಂದರ ವಿಗ್ರಹಗಳ ಗುಡಿಗಳಲ್ಲದೇ ರಾಮಾನುಜಾಚಾರ್ಯರು, ಶ್ರೀ ವೇದಂತ ದೇಶಿಕರು ಹಾಗೂ ಶ್ರೀ ಜೀಯರ್ ರವರ ಗುಡಿಗಳಿಲ್ಲದೆ ವಿವಿಧ ಆಳ್ವಾರರ ಗುಡಿಗಳೂ ಸಹ ಸೇರಿದವು. ಶ್ರೀರಂಗನಾಥ ಸ್ವಾಮಿಯವರ ಗರ್ಭಗುಡಿಯ ಪಕ್ಕದಲ್ಲಿ ಶ್ರೀ ಮಹಾಲಕ್ಷ್ಮೀ ಅಮ್ಮನವರು ಶ್ರೀರಂಗನಾಯಕಿ ನಾಮಾಂಕಿತರಾಗಿ ಪ್ರತ್ಯೇಕ ಗರ್ಭಗುಡಿಯಲ್ಲಿ ನೆಲೆಸಿರುತ್ತಾರೆ.

ಶ್ರೀರಂಗನಾಥ ಸ್ವಾಮಿಯವರ ದೇವಾಲಯವನ್ನು ಪೌರಾಣಿಕ ಹಿನ್ನೆಲೆಯಿಂದ ಗಮನಿಸಿದಾಗ ಶ್ರೀರಂಗ ಕ್ಷೇತ್ರ ಸುತ್ತಲೂ ಹರಿಯುವ ಕಾವೇರಿ ಮಾತೆಯ ಪ್ರಾರ್ಥನೆಯ ಮೇರೆಗೆ ಹಾಗೂ ಶ್ರೀ ಗೌತಮ ಮಹರ್ಷಿಗಳ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದ ಶ್ರೀಮಹಾ ವಿಷ್ಣುವು ಶ್ರೀರಂಗನಾಥ ನಾಮಂಕಿರಾಗಿ ಈ ಕ್ಷೇತ್ರದಲ್ಲಿ ನೆಲೆಸಿರುವುದಾಗಿ ಶ್ರೀ ವ್ಯಾಸ ಮಹರ್ಷಿ ಪ್ರಣೀತ ಶ್ರೀ ಬ್ರಹ್ಮಾಂಡ ಪುರಣಾದಲ್ಲಿ ಉಕ್ತವಾಗಿದೆ. ಕಾವೇರಿ ನದಿಯಿಂದ ಸುತ್ತುವರಿಯಲ್ಪಟ್ಟ ಮೂರು ರಂಗ ಕ್ಷೇತ್ರಗಳಲ್ಲಿ ಆದಿರಂಗ ನೆಂತಲೂ, ಶ್ರೀಮತ್ ಪಶ್ಚಿಮ ರಂಗನಾಥ ನೆಂತಲೂ, ಗೌತಮ ಕ್ಷೇತ್ರವೆಂದೂ ಸಹ ಕ್ಷೇತ್ರವನ್ನು ಕರೆಯುತ್ತಾರೆ.

ಶ್ರೀರಂಗಪಟ್ಟಣದಲ್ಲಿ ರಂಗನಾಥಸ್ವಾಮಿ ಆದಿ ಶೇಷು (ಏಳು ತಲೆ ಸರ್ಪ) ದ ಸುರುಳಿಗಳ ಮೇಲೆ ಎದೆಯಲ್ಲಿರುವ ದೇವಿಯೊಂದಿಗೆ ವಿಶ್ರಾಂತಿ ಪಡೆಯುತ್ತಿದ್ದಾನೆ. ಮಲಗಿರುವ

ಭಂಗಿಯ ಪ್ರತಿಮೆಗಳಲ್ಲಿ ಇದು ಕರ್ನಾಟಕ ರಾಜ್ಯದಲ್ಲಿಯೇ ಪ್ರತಿಮೆ ಎಂದು ಹೇಳಲಾಗುತ್ತದೆ. ಗೌತಮ ಮತ್ತು ಕಾವೆರಿ ದೇವಿಯರ ವಿಗ್ರಹಗಳನ್ನು ಭಗವಂತನ ಪವಿತ್ರ ಪಾದಗಳಲ್ಲಿ ಪ್ರತಿಷ್ಠಾಪಿಸಲಾಗಿದೆ.

ದರ್ಶನ ಸಮಯ - ಬೆಳಿಗ್ಗೆ 6.30 ರಿಂದ 7.30 ಮತ್ತು 9.30 ರಿಂದ 1.30 ರವರೆಗೆ, ಸಂಜೆ 4.00 ರಿಂದ 7.00 ರವರೆಗೆ

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಶ್ರೀರಂಗಪಟ್ಟಣ ಪುರವರಾಧೀಶ್ವರ ಶ್ರೀ ಶ್ರೀರಂಗನಾಯಕೀ ದೇವೀ ಸಮೇತ ಶ್ರೀ ರಂಗನಾಥ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ -

ಆನಂದರೂಪೇ ನಿಜಬೋಧರೂಪೇ ಬ್ರಹ್ಮಸ್ವರೂಪೇ ಶೃತಿಮೂರ್ತಿರೂಪೇ |
ಶಶಾಂಕರೂಪೇ ರಮಣೀಯರೂಪೇ ಶ್ರೀರಂಗರೂಪೇ ರಮತಾಂಮನೋಮೇ || 1 ||

ಕಾವೇರಿತೀರೇ ಕರುಣ ವಿಲೋಲೇ ಮಂದಾರಮಾಲೇ ಧೃತ ಚಾರುಕೇಲೇ |
ದೈತ್ಯಾಂತಕಾಲೇಖಿಲ ಲೋಕಲೀಲೆ ಶ್ರೀರಂಗಲೀಲೆ ರಮತಾಂಮನೋಮೇ || 2 ||

ವಿಶೇಷ ಉತ್ಸವಗಳು - ರಥಸಪ್ತಮಿ ಬ್ರಹ್ಮೋತ್ಸವ, ವೈಕುಂಠ ಏಕಾದಶಿ ಲಕ್ಷ ದೀಪೋತ್ಸವ, ರಥಸಪ್ತಮಿ ಬ್ರಹ್ಮೋತ್ಸವ, ಮಾಘ ಶುದ್ಧ ಪೂರ್ಣಿಮಾ ಕಾವೇರಿಸ್ನಾನ, ವೈಶಾಖ ಪೌರ್ಣಿಮಿಯಂದು ಬಂಗಾರದ ಗರುಡೋತ್ಸವ,

## 3. ಚೆಲುವನಾರಾಯಣ ಮತ್ತು ಯೋಗಾನರಸಿಂಹ ದೇವಾಲಯ, ಮೇಲುಕೋಟೆ,

ಮೇಲುಕೋಟೆಯು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲೂಕಿನಲ್ಲಿರುವ ಪವಿತ್ರ ಯಾತ್ರಾ ಕೇಂದ್ರವಾಗಿದ್ದು, ಬೆಂಗಳೂರು (135 ಕಿಮೀ), ಮೈಸೂರು (50 ಕೆ ಕಿಮೀ) ಮತ್ತು ಮಂಡ್ಯ (30 ಕಿಮೀ) ದೂರದಲ್ಲಿದೆ. ಪುರಾಣಗಳಲ್ಲಿ ತಿರುನಾರಾಯಣಪುರವೆಂತಲೂ ಯಾದವಗಿರಿ ಎಂತಲೂ ಕರೆದಿದ್ದಾರೆ. ಈ ಕ್ಷೇತ್ರ ಕಾವೇರಿ ನದಿಗೆ ಉತ್ತರದಲ್ಲಿ ನಾರಾಯಣಗಿರಿಯ ಮೇಲೆ ವಿರಾಜಿಸುತ್ತಿದೆ. ಈ ಸ್ಥಳವು ಸಮುದ್ರ ಮಟ್ಟಕ್ಕಿಂತ 3 ಸಾವಿರ ಅಡಿಗಳ ಎತ್ತರದ ಬೆಟ್ಟದ ಮೇಲೆ ಇದ್ದು ಒಳ್ಳೆಯ ಪ್ರಕೃತಿ ರಮ್ಯತೆಯಿಂದ ಕೂಡಿದೆ. ಇಲ್ಲಿಯ ಆರಾಧ್ಯ ದೈವ ಶ್ರೀಚಲುವನಾರಾಯಣಸ್ವಾಮಿ, ಕೃತಯುಗದಲ್ಲಿ ದತ್ತಾತ್ರೇಯರಿಂದ ಪೂಜಿಸಲ್ಪಟ್ಟು ವೇದಾದ್ರಿಯೆಂದೂ, ತ್ರೇತಾಯುಗದಲ್ಲಿ ನಾರಾಯಣಾದ್ರಿಯೆಂದೂ, ದ್ವಾಪರ ಯುಗದಲ್ಲಿ ಶ್ರೀಕೃಷ್ಣಬಲರಾಮದಿಂದ ಪೂಜೆಗೊಂಡು ಯಾದವಾದ್ರಿಯೆಂದೂ, ಕಲಿಯುಗದಲ್ಲಿ ಯತಿಶ್ರೇಷ್ಠರಾದ ಆಚಾರ್ಯ ರಾಮಾನುಜರಿಂದ 1000 ವರ್ಷದ ಹಿಂದೆ ಜೀರ್ಣೋದ್ಧಾರಗೊಂಡು ಈ ಸ್ಥಳವು ಯತಿಶ್ಶೈಲವೆಂದೂ ಎಲ್ಲಾ ಯುಗದಲ್ಲಿ ದಕ್ಷಿಣ ಬದರಿ ಕ್ಷೇತ್ರವೆಂದೂ ಪ್ರಸಿದ್ಧಿ ಪಡೆದಿದೆ. ಇದು ಶ್ರೀವೈಷ್ಣವ ಪಂಥದ ಒಂದು ಕೇಂದ್ರ. ಇಲ್ಲಿ ಬೆಟ್ಟದ ಮೇಲೆ ಯೋಗ ನರಸಿಂಹಸ್ವಾಮಿಯ ದೇವಸ್ಥಾವಿದೆ. ಈ ಹಳ್ಳಿ ಸಂಸ್ಕೃತ ಪಾಠ ಶಾಲೆಗೂ ಹೆಸರುವಾಸಿ.

280 ಅಡಿ ಚಚ್ಚೌಕಾಕಾರದ ವಿಸ್ತಾರವಾದ ಕಟ್ಟಡ, ಸುತ್ತಲೂ ಕೈಸಾಲೆ, ಮಹಾದ್ವಾರ, 150 ಅಡಿ ಎತ್ತರದ ರಾಜಗೋಪುರ, ಪ್ರಾಕಾರ, ಚಿಕ್ಕಗುಡಿಗಳು, ಯಾಗಶಾಲೆ, ಪಾಕಶಾಲೆ, ನವರಂಗ, ಮಂಟಪಗಳನ್ನೊಳಗೊಂಡ ಬೃಹತ್ ಚೆಲುವನಾರಾಯಣ ಸ್ವಾಮಿ ದೇವಾಲಯ. ವಿಷ್ಣುವಿನ ನಿಂತರುವ ವಿಗ್ರಹವು ಕೈಗಳಲ್ಲಿ ಶಂಕು, ಚಕ್ರ ಮತ್ತು ಗದೆ ಮತ್ತು ವರಹಸ್ತ ವನ್ನು ಹೊಂದಿದೆ. ರಾಮಪ್ರಿಯಾ ಅಥವಾ ಚೆಲುವಪಿಳ್ಳೆ ರಾಯ ಎಂದು ಕರೆಯುವ ಉತ್ಸವಮೂರ್ತಿ ವಿಗ್ರಹವು ಗರ್ಭಗೃಹದ ಮುಂಭಾಗದ ರಂಗ ಮಂಟಪದಲ್ಲಿದೆ. ವೈಕುಂಠನಾಥ, ಚಕ್ರತು ಅಲ್ವಾರ್ ಮತ್ತು ಅಂಜನೇಯ ದೇವಾಲಯಗಳು ಪ್ರಕಾರದಲ್ಲಿವೆ. ಯದುಗಿರಿ ನಾಚಿಯಾರ್ ಮತ್ತು ಕಲ್ಯಾಣಿ ನಾಚಿಯಾರ್ ದೇವಿಯರು ಪ್ರತ್ಯೇಕ ಗರ್ಭಗೃಹಗಳನ್ನು ಹೊಂದಿದ್ದಾರೆ. ಮೆಲ್ಕೋಟೆ ದೇವಾಲಯವು ವೈಷ್ಣವರ ವಿವಿಧ ಪಂಗಡಗಳಿಗೆ ಸೇರಿದ ಮಠಗಳಿಂದ ಕೂಡಿದೆ.

ಸಮೀಪದಲ್ಲಿರುವ ನೃಸಿಂಹ ಗಿರಿಯ ಮೇಲೆ ಪ್ರಹ್ಲಾದನಿಂದ ಸ್ಥಾಪಿಸಲ್ಪಟ್ಟುದೆಂದು ಪ್ರಸಿದ್ಧವಾಗಿರುವ ಯೋಗಾನರಸಿಂಹ ದೇವಾಲಯ ಪ್ರಸಿದ್ಧ. ಬೆಟ್ಟವನ್ನು ಏರಲು ಕಡಿದಾದ 200 ಮೆಟ್ಟಲಿನ ಮಾರ್ಗವಿದೆ. ನರಸಿಂಹ ಮೂರ್ತಿ ಭವ್ಯವಾಗಿದ್ದು ನೋಡಲು ಆಕರ್ಷಕವಾಗಿದೆ. ಬೆಟ್ಟದ ಮೇಲಿನಿಂದ ಮೇಲುಕೋಟೆಯ ಸುಂದರ ದೃಶ್ಯ ರಮಣೀಯವಾಗಿರುತ್ತದೆ.

ದರ್ಶನ ಸಮಯ - ಬೆಳಿಗ್ಗೆ 7.30 ರಿಂದ ಮಧ್ಯಾಹ್ನ 1.00 ಘಂಟೆ ಯವರೆಗೆ, ಸಂಜೆ 4.00 ರಿಂದ ಸಂಜೆ 6.00 ಘಂಟೆಯವರವಿಗೆ, ರಾತ್ರಿ 7.00 ರಿಂದ ರಾತ್ರಿ 8.00 ಘಂಟೆಯವರೆವಿಗೆ.

ಶ್ರೀ ಯೋಗಾನರಸಿಂಹಸ್ವಾಮಿ ದೇವಾಲಯದ ದರ್ಶನ ಸಮಯ (ಬೆಟ್ಟ) - ಬೆಳಿಗ್ಗೆ 9.30 ರಿಂದ ಮಧ್ಯಾಹ್ನ 1.30 ಘಂಟೆಯವರೆಗೆ. ಸಂಜೆ 5.30 ರಿಂದ ರಾತ್ರಿ 8.00 ಘಂಟೆಯವರೆವಿಗೆ.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಮೇಲುಕೋಟೆ ಪುರವರಾಧೀಶ್ವರ ಶ್ರೀ ಯದುಗಿರಿ ದೇವೀ ಶ್ರೀ ಕಲ್ಯಾಣಿ ದೇವೀ ಸಮೇತ ಶ್ರೀ ಚಲುವನಾರಾಯಣ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಸ್ಥಲೇ ಕೌಸ್ತುಭಂ |
ನಾಸಾಗ್ರೇ ನವಮೌಕ್ತಿಕಂ ಕರತಲೇ ವೇಣುಂ ಕರೇ ಕಂಕಣಂ ||

ವಿಶೇಷ ಉತ್ಸವಗಳು - ಶ್ರೀ ವೈರಮುಡಿ ಬ್ರಹ್ಮೋತ್ಸವ, ಶ್ರೀ ಕೃಷ್ಣರಾಜಮುಡಿ ಉತ್ಸವ, ಶ್ರೀ ರಾಜಮುಡಿ ಉತ್ಸವ, ಶ್ರೀ ರಾಮಾನುಜಾಚಾರ್ಯರ ತಿರುನಕ್ಷತ್ರ, ದೀಪೋತ್ಸವ.

**ಮೇಲುಕೋಟೆಯಲ್ಲಿ ನೋಡಲೇಬೇಕಾದ ಸ್ಥಳಗಳು** - ಶ್ರೀ ಚಲುವನಾರಾಯಣಸ್ವಾಮಿ ದೇವಾಲಯ, ಶ್ರೀ ಯೋಗಾನರಸಿಂಹಸ್ವಾಮಿ ದೇವಾಲಯ, ಬಿಲದ್ವಾರ, ದೊಡ್ಡ ಕಲ್ಯಾಣಿ, ಅಕ್ಕ-ತಂಗಿಯರ ಕೊಳ, ಧನುಷ್ಕೋಟಿ, ಏಕಶಿಲಾ ಗಣಪತಿ, ರಾಯಗೋಪುರ, ತೊಟ್ಟಿಲಮಡು, ಪಾಂಡವರ ಗುಹೆ. ರಾಷ್ಟ್ರೀಯ ಸ್ಮಾರಕವಾಗಿರುವ ಪು.ತಿ.ನ.ಅವರ ಮನೆ.

**ಹತ್ತಿರದ ಆಕರ್ಷಣೆಗಳು** - ಕೆರೆ ತೊಣ್ಣೂರು ದೇವಾಲಯಗಳು, ಹೊಸಹೊಳಲು ದೇವಾಲಯಗಳು, ನಾಗಮಂಗಲ ದೇವಾಲಯಗಳು,

ಮೆಲುಕೋಟೆಯ ಸುಬ್ಬಣ್ಣ ಮೆಸ್ ನಲ್ಲಿ ಹೆಸರುವಾಸಿಯಾದ ಪುಳಿಯೊಗರೆ ಸೇವಿಸಿ.

## 4. ಮಂಡ್ಯ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಲಕ್ಷ್ಮಿ ದೇವಿ, ಶ್ರೀ ಕೊಂಕಣೇಶ್ವರ, ಶ್ರೀ ಲಕ್ಷ್ಮಿ ನರಸಿಂಹ ದೇವಾಲಯಗಳು ಅಕ್ಕಿಹೆಬ್ಬಾಳು ಕೆ ಆರ್ ಪೇಟೆ ತಾಲ್ಲೂಕು
2. ಶ್ರೀ ಪಂಚಲಿಂಗೇಶ್ವರ, ಶ್ರೀ ವೇಣುಗೋಪಾಲ ದೇವಾಲಯಗಳು ಗೋವಿಂದನಹಳ್ಳಿ (ಎಎಸ್ಐ) ಕೆ ಆರ್ ಪೇಟೆ ತಾಲ್ಲೂಕು
3. ಶ್ರೀ ಲಕ್ಷ್ಮಿ ನಾರಾಯಣ ದೇವಾಲಯ ಹೊಸಹೋಳಲು (ಎಎಸ್ಐ) ಕೆ ಆರ್ ಪೇಟೆ ತಾಲ್ಲೂಕು
4. ಶ್ರೀ ಬ್ರಹ್ಮೇಶ್ವರ ದೇವಸ್ಥಾನ ಕಿಕ್ಕೇರಿ, ಕೆ ಆರ್ ಪೇಟೆ ತಾಲ್ಲೂಕು
5. ಶ್ರೀ ಸಂಗಮೇಶ್ವರ - ಜಂಗಮೇಶ್ವರ ದೇವಸ್ಥಾನ, ಸಿಂಧಘಟ್ಟ, ಕೆ ಆರ್ ಪೇಟೆ ತಾಲ್ಲೂಕು
6. ಶ್ರೀ ನರಸಿಂಹ, ಶ್ರೀ ಹೋಳೆ ಅಂಜನೇಯ ದೇವಾಲಯಗಳು ಮದ್ದೂರು ಮದ್ದೂರು ತಾಲ್ಲೂಕು
7. ಶ್ರೀ ಅಂಜನೇಯಸ್ವಾಮಿ ದೇವಸ್ಥಾನ ಮುತ್ತತಿ (ಎಂಡಿಕೆ) ಮಳವಳ್ಳಿ ತಾಲ್ಲೂಕು
8. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ಬಸರಾಳು (ಎಎಸ್ಐ), ಮಂಡ್ಯ ತಾಲ್ಲೂಕು
9. ಶ್ರೀ ಅನಂತ ಪದ್ಮನಾಭ, ಶ್ರೀ ಕಾಶಿ ವಿಶ್ವೇಶ್ವರ ದೇವಾಲಯಗಳು ಬುದನೂರು ಮಂಡ್ಯ ತಾಲ್ಲೂಕು
10. ಶ್ರೀ ಅರ್ಕೇಶ್ವರ ದೇವಸ್ಥಾನ ಗೊಟ್ಟಲು ಮಂಡ್ಯ (ಎಂಡಿಕೆ) ಮಂಡ್ಯ ತಾಲ್ಲೂಕು
11. ಶ್ರೀ ಲಕ್ಷ್ಮಿ ಜನಾರ್ಧನ ದೇವಾಲಯ ಮಂಡ್ಯ (ಎಂಡಿಕೆ) ಮಂಡ್ಯ ತಾಲ್ಲೂಕು
12. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ಬಸರಾಳು, ಮಂಡ್ಯ ತಾಲ್ಲೂಕು
13. ಶ್ರೀ ಚನ್ನಕೇಶವ ದೇವಸ್ಥಾನ ದೊಡ್ಡಜಟಕ ನಾಗಮಂಗಲ ತಾಲ್ಲೂಕು
14. ಶ್ರೀ ಶಾಂತಿನಾಥ ಬಸದಿ, ಪಂಚಕೂಟ ಬಸದಿ ಕಂಬದಹಳ್ಳಿ (ಎಎಸ್ಐ) ನಾಗಮಂಗಲ ತಾಲ್ಲೂಕು
15. ಶ್ರೀ ಸೌಮ್ಯಕೇಶವ, ಶ್ರೀ ಭುವನೇಶ್ವರ ಮತ್ತು ಶ್ರೀ ನರಸಿಂಹ ದೇವಾಲಯಗಳು ನಾಗಮಂಗಲ (ಎಎಸ್ಐ) ನಾಗಮಂಗಲ ತಾಲ್ಲೂಕು
16. ಶ್ರೀ ಕಾಲಭೈರವ ದೇವಾಲಯ, ಆದಿಚುಂಚನಗಿರಿ, ನಾಗಮಂಗಲ ತಾಲ್ಲೂಕು
17. ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನ ಕನ್ನಂಬಾಡಿ ಪಾಂಡವಪುರ ತಾಲ್ಲೂಕು
18. ಶ್ರೀ ಚೆಲುವನಾರಾಯಣ ಮತ್ತು ಶ್ರೀ ಯೋಗನರಸಿಂಹ ದೇವಾಲಯಗಳು

ಮೇಲುಕೋಟೆ (ಎಂಡಿಕೆ) (ಎಎಸ್ಐ) ಪಾಂಡವಪುರ ತಾಲ್ಲೂಕು

19. ಶ್ರೀ ನಂಬಿನಾರಾಯಣ, ಶ್ರೀ ಕೈಲಾಸೇಶ್ವರ, ಶ್ರೀ ವೆಂಕಟರಮಣ, ಶ್ರೀ ವೇಣುಗೋಪಾಲ, ಶ್ರೀ ಯೋಗನರಸಿಂಹ ದೇವಾಲಯಗಳು ತೊಂಡನೂರು ಅಥವಾ ಕೆರೆತೊಣ್ಣುರು (ಎಎಸ್ಐ) ಪಾಂಡವಪುರ ತಾಲ್ಲೂಕು
20. ಶ್ರೀ ಶ್ರೀನಿವಾಸ ದೇವಾಲಯ ಕರಿಘಟ್ಟ ಶ್ರೀರಂಗಪಟ್ಟಣ ತಾಲ್ಲೂಕು
21. ಶ್ರೀ ಲಕ್ಷ್ಮಿ ನರಸಿಂಹ ದೇವಸ್ಥಾನ ಶ್ರೀರಂಗಪಟ್ಟಣ ಶ್ರೀರಂಗಪಟ್ಟಣ ತಾಲ್ಲೂಕು
22. ಶ್ರೀ ನಿಮಿಶಾಂಭಾ ದೇವಸ್ಥಾನ ಶ್ರೀರಂಗಪಟ್ಟಣ (ಎಂಡಿಕೆ) ಶ್ರೀರಂಗಪಟ್ಟಣ ತಾಲ್ಲೂಕು
23. ಶ್ರೀ ರಂಗನಾಥ ದೇವಸ್ಥಾನ ಶ್ರೀರಂಗಪಟ್ಟಣ (ಎಂಡಿಕೆ) (ಎಎಸ್ಐ) ಶ್ರೀರಂಗಪಟ್ಟಣ ತಾಲ್ಲೂಕು

# 8. ರಾಮನಗರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ರಾಮನಗರ ಒಂದು ದಕ್ಷಿಣಒಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಚಾಮರಾಜನಗರ, ಮಂಡ್ಯ ಬೆಂಗಳೂರು ಗ್ರಾಮಾಂತರ, ನಗರ ಜಿಲ್ಲೆಗಳು ಹಾಗೂ ತಮಿಳುನಾಡು ಸುತ್ತುವರಿದಿವೆ. ರಾಮನಗರ ಪಟ್ಟಣವು ಜಿಲ್ಲಾ ಕೇಂದ್ರ. ಚಾಮರಾಜ ನಗರ, ಚನ್ನಪಟ್ಟಣ, ಕನಕಪೂರ, ಮಾಗಡಿ, ರಾಮನಗರ ಎಂಬ 4 ತಾಲ್ಲೂಕುಗಳನ್ನು ಹೊಂದಿದೆ.

ಏಷ್ಯಾದ ಅತಿದೊಡ್ಡ ಸರ್ಕಾರಿ ರೇಷ್ಮೆಗೂಡು ಮಾರುಕಟ್ಟೆ ರಾಮನಗರ. ಚೆನ್ನಪಟ್ಟಣ ಆಟಿಗೆ ಗೊಂಬೆ, ಬಿಡದಿ ತಟ್ಟೆ ಇಡ್ಲಿ, ಮದ್ದೂರು ವಡೆ ಈ ಜಿಲ್ಲೆಯ ವಿಶೇಷತೆ.

ಜನಪದ ಲೋಕ ಜಾನಪದ ವಸ್ತು ಸಂಗ್ರಹಾಲಯ, ರಾಮನಗರ

ಮೆಕೆದಾಟು, ಸಂಗಮ, ರಾಮದೇವರ ಬೆಟ್ಟ ರಣಹದ್ದು ಅಭಯಾರಣ್ಯ, ತಿಮ್ಮಪ್ಪನ ಬೆಟ್ಟ ಬೇವೂರು, ಮಂಚನಬೆಲೆ ಅಣೆಕಟ್ಟು, ಕಣ್ವ ಜಲಾಶಯ, ವಂಡರ್ ಲಾ ಥೀಮ್ ಪಾರ್ಕ್, ಮುಂತಾದವು ರಾಮನಗರ ಜಿಲ್ಲೆಯ ಪ್ರವಾಸೀ ಆಕರ್ಷಣೆಗಳು.


RAMANAGARA DISTRICT
KARNATAKA
N
W
E
S
0 5 10
kilometers
MAGADI
RAMANAGARAM
CHANNAPATNA
KANAKAPURA
District Headquarter
Taluk Headquarter
District Boundary
Taluk Boundary
NH / SH
Metalled Road
Railway Line
KARNATAKA STATE

## 1. ರಂಗನಾಥ ದೇವಸ್ಥಾನ, ತಿರುಮಲೆ, ಮಗಡಿ ತಾಲ್ಲೂಕು

ರಾಮನಗರದಿಂದ 36 ಕಿ.ಮೀ. ದೂರದಲ್ಲಿರುವ ಮಾಗಡಿ ಪಟ್ಟಣದಲ್ಲಿರುವ ಶ್ರೀ ರಂಗನಾಥಸ್ವಾಮಿ ದೇವಾಲಯವು ಚೋಳರ ಕಾಲದ ಪ್ರಸಿದ್ಧ ದೇವಾಲಯವಾಗಿದ್ದು, ಈ ದೇವಾಲಯವನ್ನು ದ್ರಾವಿಡ ಶೈಲಿಯಲ್ಲಿ ಕಟ್ಟಲಾಗಿದ್ದು, ಸುಮಾರು 4.5 ಅಡಿ ಎತ್ತರದ ಶ್ರೀ ರಂಗನಾಥಸ್ವಾಮಿ ವಿಗ್ರಹದ ಮುಖ ಪಶ್ಚಿಮ ದಿಕ್ಕಿನಲ್ಲಿದ್ದು, ಉಳಿದ ಎಲ್ಲಾ ವಿಗ್ರಹಗಳ ಮುಖ ಪೂರ್ವದಿಕ್ಕಿಗಿವೆ. ಗರ್ಭಗೃಹದಲ್ಲಿರುವ ಮೂಲವಿಗ್ರಹವು ಚತುರ್ಬಾಹುಗಳಿಂದ ಕೂಡಿದ್ದು ನಿಂತ ಭಂಗಿಯಲ್ಲಿ ಸ್ಥಾಪನೆಯಾಗಿದೆ. ಒಂದು ಹಸ್ತದಲ್ಲಿ ವರದಮುದ್ರೆ, ಶಂಖ, ಚಕ್ರ, ಗದಾಪಾಣಿಯು ಸುಂದರವಾಗಿದ್ದು, ಭಗವಂತನು ವರದಮುದ್ರೆಯಿಂದ ಭಕ್ತರ ಎಲ್ಲ ಪ್ರಾರ್ಥನೆಯನ್ನೂ ನೆರವೇರಿಸುವನು ಎಂಬ ನಂಬಿಕೆ ಬಲವಾಗಿದೆ, ಸ್ವಾಮಿಯ ಎಡಗಡೆಗೆ (ಹಿಂಭಾಗದಿಂದ) ಶ್ರೀಅಮ್ಮನವರು, ಮುಂದೆ ಬಲಗಡೆಗೆ ಸೀತಮ್ಮನವರು, ಎದುರಿಗೆ ಹನುಮ-ಗರುಡರ ದೊಡ್ಡ ಕೆತ್ತನೆಗಳೂ, ಸುತ್ತ ಶ್ರೀ ರಾಮ, ರಾಮಾನುಜಾಚಾರ್ಯರು, ಆಳ್ವಾರುಗಳೂ ಮತ್ತು ವೈಷ್ಣವ ಭಕ್ತರ ಪ್ರತಿಮೆಗಳು ಪ್ರತ್ಯೇಕ ಗರ್ಭಗೃಹಗಳನ್ನು ಹೊಂದಿದ್ದು ಮನೋಹರವಾಗಿವೆ. ಶ್ರೀ ರಂಗನಾಥಸ್ವಾಮಿಯ ಎಡಬದಿಗೆ (ಹಿಂಬದಿಯಿಂದ) ಗೋಡೆಯ ಮೇಲೆ ಮಲಗಿರುವ ಭಂಗಿಯಲ್ಲಿರುವ ದೇವರನ್ನು ಮಾಗಡಿರಂಗ, ಮಕ್ಕಳರಂಗ, ಬೆಳೆಯುವರಂಗ, ಮೂಲರಂಗ ಎಂದು ಕರೆಯುತ್ತಾರೆ. ಇದು ದಿನೇ ದಿನೇ ಬೆಳೆಯುತ್ತಿದೆ ಎಂದೂ ಎನ್ನುತ್ತಾರೆ.

ದೇವಾಲಯದ ಮುಂಭಾಗದಲ್ಲಿ ಪುರಾತನ ಕಾಲದ ಪುಷ್ಕರಣಿ ಇದೆ. ನಿತ್ಯ ದಾಸೋಹವಿರುವ ಈ ದೇವಾಲಯಕ್ಕೆ ಭೇಟಿ ನೀಡುವ ಪ್ರವಾಸಿಗರಿಗೆ ಮೂಲಭೂತ ಸೌಕರ್ಯಗಳು ಹಾಗೂ ವಸತಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.

ಶ್ರೀರಂಗನಾಥ ಸ್ವಾಮಿ ದೇವಾಲಯದ ಬಲಭಾಗಕ್ಕೆ ಅನತಿ ದೂರದಲ್ಲಿರುವ “ಸ್ತಂಭಗಿರಿ” ಎಂದು ಹೆಸರಾದ ಶ್ರೀ ನರಸಿಂಹಸ್ವಾಮಿ ಬೆಟ್ಟ ಪ್ರವಾಸಿಗರನ್ನು ಆಕರ್ಷಿಸುತ್ತದೆ. ಭಕ್ತ ಪ್ರಹ್ಲಾದನು ಸ್ಥಾಪಿಸಿದನೆಂದು ಹೇಳಲಾಗುವ ಕಂಬದ ಮುಂದಿರುವ ಯೋಗಾನರಸಿಂಹನನ್ನು ಕಂಬದ ನರಸಿಂಹಸ್ವಾಮಿ ಎಂದು ಕರೆಯುತ್ತಾರೆ.

ಪ್ರಮುಖ ಸೇವೆಗಳು, - ಬೆಳೆಯೋರಂಗನ ಬೆಣ್ಣೆ ಅಲಂಕಾರ, ಬ್ರಹ್ಮರಥೋತ್ಸವ

## 2. ರಾಮಪ್ರಮೇಯ ಮತ್ತು ಅಂಬೆಗಾಲು ಕೃಷ್ಣ ದೇವಸ್ಥಾನಗಳು, ದೊಡ್ಡ ಮಲ್ಲೂರು

ಮೈಸೂರು - ಬೆಂಗಳೂರು ಹೆದ್ದಾರಿಯಲ್ಲಿ, ಬೆಂಗಳೂರಿನಿಂದ ಸುಮಾರು 60 ಕಿ.ಮೀ. ದೂರದಲ್ಲಿ (ಚನ್ನಪಟ್ಟಣದಿಂದ 2 ಕಿ.ಮೀ.) ದೊಡ್ಡಮಲ್ಲುರು ಗ್ರಾಮದಲ್ಲಿ ಪ್ರಖ್ಯಾತವಾದ ಶ್ರೀ ಅಪ್ರಮೇಯ ಸ್ವಾಮಿ, ಶ್ರೀ ಅರವಿಂದವಲ್ಲಿ ಮತ್ತು ಜಗದ್ವಿಖ್ಯಾತವಾದ ಶ್ರೀ ಅಂಬೆಗಾಲು ಕೃಷ್ಣನ ಭವ್ಯ ದೇಗುಲವನ್ನು ತಲುಪಬಹುದು. ಇದೊಂದು ದಿವ್ಯ ಕ್ಷೇತ್ರ. ಪುಣ್ಯಭೂಮಿ. ಹಚ್ಚಹಸುರಾದ ಸಸ್ಯರಾಶಿ, ಪುಣ್ಯತೀರ್ಥಗಳು, ಮನೋಹರವಾದ ದೇವಸ್ಥಾನ ಸಮುಚ್ಚಯ.

ಶ್ರೀ ಅಪ್ರಮೇಯ ಸ್ವಾಮಿ ದೇವಸ್ಥಾನವು ಬಹಳ ಪ್ರಾಚೀನವಾದ ಕಟ್ಟಡ. ಐತಿಹ್ಯದ ಪ್ರಕಾರ 'ದಕ್ಷಿಣ ಅಯೋಧ್ಯೆ' ಎಂದು ಪ್ರಸಿದ್ಧವಾದ ಈ ಸ್ಥಳದಲ್ಲಿ ಶ್ರೀರಾಮಚಂದ್ರನು ಅನೇಕ ವರ್ಷಗಳ ಕಾಲ ತಂಗಿದ್ದು ಅಪ್ರಮೇಯ ಸ್ವಾಮಿಯನ್ನು ಆರಾಸಿದ್ದ. ಆದ್ದರಿಂದ ಅಪ್ರಮೇಯನು 'ಶ್ರೀರಾಮಾಪ್ರಮೇಯ' ಎಂದೂ ಪ್ರಸಿದ್ಧ. ಶ್ರೀರಾಮಚಂದ್ರನು ಈ ಸ್ಥಳದಲ್ಲಿ ಹೋಮಗಳು ಮತ್ತು ಇತರ ಧಾರ್ಮಿಕ ವಿಗಳನ್ನು ಆಚರಿಸಿದ್ದ. ಅವನು ಯಜ್ಞಗಳನ್ನು ಮಾಡಿದ್ದ ಸಂರಚನೆಗಳ ಅವಶೇಷಗಳು ಇಂದಿಗೂ ಇಲ್ಲಿ ಕಂಡುಬರುತ್ತವೆ. ಬ್ರಹ್ಮಾಂಡ ಪುರಾಣದ ಕ್ಷೇತ್ರ ಮಹಾತ್ಮೆ ಸ್ಕಂಧದಲ್ಲಿ ಅಪ್ರಮೇಯ ಸ್ವಾಮಿಯನ್ನು ಕುರಿತು ಹನ್ನೆರಡು ಅಧ್ಯಾಯಗಳಷ್ಟು ವರ್ಣನೆಯಿದೆ.

ದೇವಾಲಯದ ವಾಸ್ತುಶಿಲ್ಪ - ದೇವಸ್ಥಾನದ ಸುಂದರ ರಾಜಗೋಪುರವು ಮುಗಿಲು ಮುಟ್ಟುವಂತೆ ಭವ್ಯವಾಗಿ ನಿಂತಿದೆ. ದ್ರಾವಿಡ ವಾಸ್ತುಶೈಲಿಯಲ್ಲಿ ನಿರ್ಮಾಣವಾಗಿರುವ ಈ ರಾಜಗೋಪುರದ ಪಾರ್ಶ್ವಗಳಲ್ಲಿ ದಶಾವತಾರದ ಮನೋಜ್ಞ ಶಿಲ್ಪಗಳು ಗೋಡೆಗಳನ್ನು ಅಲಂಕರಿಸಿವೆ. ಮಹಾದ್ವಾರವು 30 ಅಡಿ ಎತ್ತರವಾಗಿದೆ. ಮಹಾದ್ವಾರದ ಎದುರು 30 ಅಡಿ ಎತ್ತರದ ಅಖಂಡ ಶಿಲೆಯ ದೀಪಸ್ತಂಭವಿದ್ದು ಎತ್ತರದಲ್ಲಿ ಅದು ಮಹಾದ್ವಾರದೊಡನೆ ಸ್ಪರ್ಧಿಸುತ್ತಿದೆ. ರಾಜಗೋಪುರಕ್ಕೆ ಅಭಿಮುಖವಾಗಿ ಪುರಂದರದಾಸ ಮಂಟಪವಿದೆ. ಇದು ನವನೀತ ಕೃಷ್ಣನನ್ನು ನೋಡಿ ಆನಂದಪರವಶರಾದ ಪುರಂದರದಾಸರ ಭಾವೋದ್ರೇಕವನ್ನು ತಲತಲಾಂತರಗಳ ಕಾಲ ಅಜರಾಮರಗೊಳಿಸಿದೆ. "ಜಗದೋದ್ಧಾರನ ಆಡಿಸಿದಳು ಯಶೋದ" ಎಂಬ ಪ್ರಖ್ಯಾತ ಕೀರ್ತನೆಯನ್ನು ರಚಿಸಿದ ದಾಸವರೇಣ್ಯರಿಗೆ ಸಾರ್ಥಕವಾದ ಸ್ಮಾರಕವಾಗಿದೆ.

ಅರವಿಂದವಲ್ಲಿ ಅಮ್ಮನವರು - ದೇವಸ್ಥಾನದ ವಾಯವ್ಯ ಮೂಲೆಯಲ್ಲಿರುವ ವಿಷ್ಣು ತೀರ್ಥದ ಕಮಲ ಪುಷ್ಪದಲ್ಲಿ ಜನಿಸಿದ ಕಾರಣದಿಂದ ಮಹಾಲಕ್ಷ್ಮೀದೇವಿಯನ್ನು ಅರವಿಂದವಲ್ಲಿ ಎಂದು ಕರೆಯುತ್ತಾರೆ. ದೇವಿಯು ಒಂದು ಕಮಲದಲ್ಲಿ ಪದ್ಮಾಸನ ಭಂಗಿಯಲ್ಲಿ ಕುಳಿತು, ಚತುರ್ಭುಜ ರೂಪದಲ್ಲಿ ದರ್ಶನ ಕೊಡುತ್ತಿದ್ದಾಳೆ. ಮೇಲಿನ ಎರಡು ಕೈಗಳಲ್ಲಿ ಕಮಲ ಪುಷ್ಪಗಳನ್ನು ಹಿಡಿದುಕೊಂಡಿದ್ದಾಳೆ, ಉಳಿದ ಎರಡು ಕೈಗಳು ವರದ ಮತ್ತು ಅಭಯ ಮುದ್ರೆಗಳಲ್ಲಿದ್ದು ಭಕ್ತರಿಗೆ ಅನುಗ್ರಹಿಸುತ್ತಿದ್ದಾಳೆ. ಅದೇ ಗರ್ಭಗುಡಿಯಲ್ಲಿ ಶ್ರೀ ಆಂಡಾಳ್ ಮತ್ತು ಶ್ರೀ ದೇಶಿಕನ್ ಅವರ ಅರ್ಚಾ ವಿಗ್ರಹಗಳಿವೆ.

ಅಪ್ರಮೇಯ ಸ್ವಾಮಿ - ಶ್ರೀ ಅಪ್ರಮೇಯ ಸ್ವಾಮಿಯ ಭವ್ಯವಾದ ಮೂಲ ಮೂರ್ತಿಯು ಸಾಲಿಗ್ರಾಮ ಶಿಲೆಯಿಂದ ನಿರ್ಮಿತಗೊಂಡಿದೆ. 'ಪ್ರಮೇಯ' ಎಂದರೆ ಅಳೆಯಬಹುದಾದ ಗಾತ್ರ. 'ಅಪ್ರಮೇಯ' ಎಂದರೆ ಅಳೆಯಲಾಗದ್ದು. ಅವನ ಕರುಣೆಯು ಅಳೆಯಲಾಗದ್ದು, ಆದ್ದರಿಂದ ಸ್ವಾಮಿಯು 'ಅಪ್ರಮೇಯ' ಎಂದು ಪ್ರಸಿದ್ಧನಾಗಿದ್ದಾನೆ. ಚತುರ್ಭುಜಾಕಾರನಾದ ಸ್ವಾಮಿಯು ಮೇಲಿನ ಎರಡು ಕೈಗಳಲ್ಲಿ ಶಂಖ ಮತ್ತು ಚಕ್ರವನ್ನು ಹಿಡಿದಿದ್ದಾನೆ. ಕೆಳಗಿನ ಎರಡು ಕೈಗಳಲ್ಲಿ ಗದಾ ಮತ್ತು ಪದ್ಮಗಳನ್ನು ಹಿಡಿದಿದ್ದಾನೆ. ಪದ್ಮವು ಅಭಯ ಮುದ್ರೆಯ ಹಸ್ತದಲ್ಲಿದೆ. ಶುಕನಾಸಿ ಮಂಟಪದಲ್ಲಿ ಅಪ್ರಮೇಯ ಸ್ವಾಮಿಯ ಉತ್ಸವಮೂರ್ತಿಯು ಗಂಧದ ಮಂಟಪದಲ್ಲಿದೆ. ಈ ಉತ್ಸವ ಕೈಂಕರ್ಯವನ್ನು ನೆರವೇರಿಸುತ್ತಿದ್ದಾರೇನೋ ಎನಿಸುತ್ತದೆ.

ಅಂಬೆಗಾಲು ಕೃಷ್ಣ - ದೇವಸ್ಥಾನದ ವಾಯವ್ಯ ಪಾಗಾರದಲ್ಲಿ ಸಾಗಿದರೆ ಪ್ರಖ್ಯಾತ (ನವನೀತ) ಅಂಬೆಗಾಲು ಕೃಷ್ಣನ ಸನ್ನಿಧಿಯು ಎದುರಾಗುತ್ತದೆ. ಈ ಕೃಷ್ಣನ ಆಕೃತಿಯು ಅನೇಕ ಪುರಾಣಗಳಲ್ಲಿ ಪ್ರಸ್ತಾವವಾಗಿದೆ. ವ್ಯಾಸ ಮಹರ್ಷಿಗಳು ಈ ವಿಗ್ರಹವನ್ನು ಪ್ರತಿಷ್ಠಾಪಿಸಿದರೆಂದು ಹೇಳಲಾಗಿದೆ. ಅವನಿಗೆ ಪ್ರೀತಿಪಾತ್ರವಾದ ಬೆಣ್ಣೆಯ ಮುದ್ದೆಯನ್ನು ಬಲಗೈಯಲ್ಲಿ ಹಿಡಿದುಕೊಂಡಿದ್ದಾನೆ. ನಿಮ್ಮಲ್ಲಿ ಮಾತೃಪ್ರೇಮವನ್ನು ಆಹ್ವಾನಿಸುವ ರೀತಿಯಲ್ಲಿ ಶ್ರೀಕೃಷ್ಣನು ನಿಮ್ಮೆಡೆಗೆ ಅಂಬೆಗಾಲು ಇಡುತ್ತಾ ಬರುತ್ತಿರುವ ಹಾಗೆ ತೋರುತ್ತದೆ. ಅಪ್ರಯತ್ನಿತವಾಗಿ ಪ್ರೀತಿಯಧಾರೆಯನ್ನು ಅವನ ಮೇಲೆ ಕರೆಯುವಂತೆ ಆಗ್ರಹಪಡಿಸುತ್ತಿದ್ದಾನೇನೋ ಎನ್ನುವಂತಿದೆ. ಅವನ ಮುಖವು ಪೂರ್ಣಚಂದ್ರ ಬಿಂಬದಂತಿದೆ. ಹರಿಣದಂತಹ ಅವನ ಕಣ್ಣುಗಳು ಬಹಳ ಆಕರ್ಷಕವಾಗಿವೆ. ಗುಂಗುರು ಕೂದಲು ಚಿತ್ತಾಕರ್ಷಕವಾಗಿದ್ದು ನಯನ ಮನೋಹರವಾಗಿವೆ. ಈ ನೀಲಮೇಘ ಶ್ಯಾಮನು

ಒಂದು ಗರುಡಪೀಠದ ಮೇಲೆ ಅಂಬೆಗಾಲಿಡುತ್ತಿದ್ದಾನೆ. ಪದಕಗಳು, ಸರಗಳು, ಕಂಠೀಹಾರಗಳು ಮತ್ತು ಕಾಲಂದಿಗೆಗಳೇ ಮುಂತಾದ ಅನೇಕ ಆಭರಣಗಳು ಅವನನ್ನು ಅಲಂಕರಿಸಿವೆ. ಅವನು ಹುಲಿಯುಗುರಿನ ಪದಕವನ್ನು ತೂಗಾಡಿಸುತ್ತಾ ತನ್ನ ಶೌರ್ಯವನ್ನು ಪ್ರದರ್ಶಿಸುತ್ತಿದ್ದಾನೆ. ಅಸಂಖ್ಯಾತ ಭಕ್ತರು ಅವನ ಅಸೀಮ ಸೌಂದರ್ಯದ ಮೇಲೆ ಕಣ್ಣು ಹಾಕಿ ಅವನಿಗೆ ಕಣ್ಣು ದೃಷ್ಟಿ ದೋಷ ಆದೀತೆಂದು ಪುರೋಹಿತರು, ಅದನ್ನು ತಡೆಯಲು, ಈ ಪದಕವನ್ನು ತಪ್ಪದೆ ತೊಡಿಸುತ್ತಾರೆ. ಈ ದಿವ್ಯ ಸೌಂದರ್ಯವನ್ನು ಸವಿಯುತ್ತಿರುವ ನಿಮಗೆ ಅವನ ಒಡ್ಯಾಣದ ಕಿರುಗಂಟೆಗಳ ಕಿಣಿ ಕಿಣಿ ನಾದ ಮತ್ತು ಅವನ ಕೋಮಲವಾದ ಪಾದಗಳನ್ನು ಅಲಂಕರಿಸಿರುವ ಜಾಜ್ವಲ್ಯಮಾನವಾದ ಕಾಲಂದಿಗೆಗಳ ಝುಣಝುಣನಾದ, ಅವನು ನಿಮ್ಮ ಹೃದಯಕ್ಕೆ ಲಗ್ಗೆಯಿಡುತ್ತಿರುವಾಗ, ಕಿವಿದುಂಬಿದಂತೆ ಭಾಸವಾಗದೆಯಿರದು.

ಪುರಂದರದಾಸರು ಈ ಸನ್ನಿಧಿಗೆ ಭೇಟಿ ನೀಡಿದಾಗ ಅಂಬೆಗಾಲು ಕೃಷ್ಣನ ಚೆಲುವಿನಿಂದ ಸ್ಫೂರ್ತಿಗೊಂಡು ಜನಪ್ರಿಯ ಕೀರ್ತನೆಯಾದ “ಜಗದೋದ್ಧಾರನ ಆಡಿಸಿದಳು ಯಶೋದ” ರಚಿಸಿದರು. ಅವನು ತನ್ನ ಬಲಗೈಯಲ್ಲಿ ಹಿಡಿದಿರುವ ಸ್ವಾದಿಷ್ಟವಾದ ನವನೀತವು ಸಾಧಾರಣವಾದ ಬೆಣ್ಣೆಯಲ್ಲ. ಬೆಣ್ಣೆಯ ಮುದ್ದೆಯಂತೆ ರೂಪಿತವಾದ ಆತ್ಮಸಾಕ್ಷಾತ್ಕಾರದ ಜ್ಞಾನ. ಶುದ್ಧ ಮನಸ್ಸಿನಿಂದ ನೀವು ಅವನಲ್ಲಿ ಕೋರಿದರೆ ಪರಂಧಾಮನು ಈ ಅಮೂಲ್ಯವಾದ ತಿನಿಸನ್ನು ನಿಮಗೆ ನೀಡಲು ಸದಾ ಸಿದ್ಧನಾಗಿದ್ದಾನೆ. ಬೇಡಿದವರಿಗೆ ಸಂತಾನಭಿಕ್ಷೆಯನ್ನು ನೀಡುವುದಕ್ಕೂ ಈ ಸ್ವಾಮಿಯು ಪ್ರಸಿದ್ಧನಾಗಿದ್ದಾನೆ. ಸಂತಾನಾಪೇಕ್ಷೆಯ ಹರಕೆ ಹೊತ್ತ ಜನರು ಅರ್ಪಿಸಿದ ರಾಶಿರಾಶಿ ಬೆಳ್ಳಿಯ ಮತ್ತು ಮರದ ತೊಟ್ಟಿಲುಗಳೇ ಈ ಮಾತಿಗೆ ಸಾಕ್ಷಿ.

ದರ್ಶನ ಸಮಯ - ಬೆಳಿಗ್ಗೆ 8:00 ರಿಂದ 12:30 ಮತ್ತು ಸಂಜೆ 5:30 ರಿಂದ 8:30

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ದೊಡ್ಡಮಲ್ಲೂರು ಪುರವರಾಧೀಶ್ವರ ಶ್ರೀ ಅರವಿಂದವಲ್ಲಿ ದೇವೀ ಸಮೇತ ಶ್ರೀ ಅಪ್ರಮೇಯ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಕರಾರ ವಿಂದೇನ ಪದಾರವಿಂದಂ ಮುಖಾರವಿಂದೆ
ವಿನಿವೆಶಯಂತಂ | ವಟಸ್ಯ ಪತ್ರಸ್ಯ ಪುಟೆ ಶಯಾನಂ ಬಾಲಂ ಮುಕುಂದಂ ಮನಸಾ
ಸ್ಮರಾಮಿ ||

## 3. ರಾಮನಗರ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ನದಿ ನರಸಿಂಹ ದೇವಸ್ಥಾನ, ದೊಡ್ಡ ಮಲ್ಲೂರು, ಚನ್ನಪಟ್ಟಣ ತಾಲ್ಲೂಕು
2. ಗುಂಡಿನಾ ಬಸವಣ್ಣ ದೇವಸ್ಥಾನ, ಕಲ್ಯಾ, ಮಾಗಡಿ ತಾಲ್ಲೂಕು
3. ಶ್ರೀ ಸೋಮೇಶ್ವರ ದೇವಸ್ಥಾನ, ಮಾಗಡಿ, ಮಾಗಡಿ ತಾಲ್ಲೂಕು
4. ಶ್ರೀ ಲಕ್ಷ್ಮಿ ನರಸಿಂಹ ಮತ್ತು ಶ್ರೀ ವಿರಭದ್ರ ದೇವಾಲಯಗಳು, ಸಾವನದುರ್ಗ, ಮಾಗಡಿ ತಾಲ್ಲೂಕು
5. ಶ್ರೀ ಅಂಜನೇಯಸ್ವಾಮಿ ದೇವಸ್ಥಾನ, ಕೆಂಗಲ್, ರಾಮನಗರ ತಾಲ್ಲೂಕು
6. ಶ್ರೀ ರೇವಣ ಸಿದ್ದೇಶ್ವರ ದೇವಸ್ಥಾನ, ರೇವಣ ಸಿದ್ದೇಶ್ವರ ಬೆಟ್ಟ, ರಾಮನಗರ ತಾಲ್ಲೂಕು
7. ಶ್ರೀ ರಾಮ ದೇವಸ್ಥಾನ, ರಾಮದೇವರ ಬೆಟ್ಟ, ರಾಮನಗರ ತಾಲ್ಲೂಕು
8. ಶ್ರೀ ಕಬ್ಬಾಳಮ್ಮ ದೇವಸ್ಥಾನ, ಕಬ್ಬಾಳು, ಕನಕಪುರ ತಾಲ್ಲೂಕು

# 9. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಬೆಂಗಳೂರು ಗ್ರಾಮಾಂತರ ಒಂದು ದಕ್ಷಿಣಬಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು, ರಾಮನಗರ ಬೆಂಗಳೂರು ನಗರ ಜಿಲ್ಲೆಗಳು ಸುತ್ತುವರಿದಿವೆ. ಬೆಂಗಳೂರು ನಗರವೇ ಜಿಲ್ಲಾ ಕೇಂದ್ರ. ದೇವನಹಳ್ಳಿ, ದೊಡ್ಡಬಳ್ಳಾಪುರ, ಹೊಸಕೋಟೆ, ನೆಲಮಂಗಲ ಎಂಬ 4 ತಾಲ್ಲೂಕುಗಳನ್ನು ಹೊಂದಿದೆ.

ಅರ್ಕಾವತಿ, ದಕ್ಷಿಣ ಪಿನಾಕಿನಿ, ಶಿಂಷಾ, ಕುಮುದ್ವತಿ ನದಿಗಳು ಈ ಜಿಲ್ಲೆಯಲ್ಲಿ ಹರಿದಿವೆ.

ದೇವನಹಳ್ಳಿ ಚಕ್ಕೋತ, ರಾಗಿ ಮುದ್ದೆ ಊಟ, ಅವರೆಕಾಳು ಸಾರು, ದೊಡ್ಡಬಳ್ಳಾಪುರದ ಅಪ್ಪಟ ರೇಷ್ಮೆ ಸೀರೆಗಳು ಈ ಜಿಲ್ಲೆಯ ವಿಶೇಶ ಸ್ಥಳೀಯ ವಸ್ತುಗಳು.



## 1. ಹೊನ್ನಾದೇವಿ ಗಂಗಾಧರೇಶ್ವರ ದೇವಸ್ಥಾನಗಳು ಶಿವಗಂಗೆ

ಶಿವಗಂಗೆ ಕ್ಷೇತ್ರವು ಒಂದು ಸಾಹಸ ಮತ್ತು ಭಕ್ತಿಯ ಕೇಂದ್ರವಾಗಿದೆ. ಸುಮಾರು 804.8 ಮೀಟರ್ ಅಥವಾ 2640.3 ಅಡಿ ಎತ್ತರವಿರುವ ಸುಂದರ ಪರ್ವತ ಶಿಖರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದಾಬಸ್‌ಪೇಟೆಯಿಂದ 7 ಕಿ.ಮೀ ದೂರದಲ್ಲಿ ಹಾಗೂ ಬೆಂಗಳೂರುನಿಂದ 56 ಕಿ.ಮೀ ದೂರದಲ್ಲಿದೆ. ಶಿವಗಂಗೆಯು ಭಕ್ತಿ ಪ್ರಧಾನ ತೀರ್ಥ ಯಾತ್ರೆ ಮತ್ತು ಸಾಹಸಮಯ(ಅಡ್ವೆಂಚರ್) ತಾಣವಾಗಿದೆ ದೂರದಿಂದ ಬೆಟ್ಟವು ಶಿವಲಿಂಗದ ಆಕಾರದಲ್ಲಿ ಕಾಣುತ್ತದೆ.

ಬೆಟ್ಟದ ಮೇಲಿರು ಅನೇಕ ಜಲತಾಣಗಳನ್ನು ಪವಿತ್ರ ಗಂಗಾನದಿ ಎಂದು ನಂಬುತ್ತಾರೆ ಇದರ ಪರಿಣಾಮವಾಗಿ, ಈ ಬೆಟ್ಟವನ್ನು ಶಿವಗಂಗೆ ಎಂದು ಕರೆಯುತ್ತಾರೆ. ನಂದಿ ಕಲ್ಲಿನ ಕೆತ್ತನೆಯು ಈ ಸ್ಥಳದ ಪ್ರಮುಖ ಆಕರ್ಷಣೆಯಾಗಿದೆ. ಗಂಗಾಧರೇಶ್ವರ, ಹೊನ್ನಾದೇವಿ ದೇವಸ್ಥಾನ, ಒಳಕಲ್ಲು ತೀರ್ಥ ನಂದಿ ಪ್ರತಿಮೆ ಪಾತಳ ಗಂಗೆ, ಇವುಗಳ ಸಂಗಮದಿಂದ ಈ ಸ್ಥಳವನ್ನು ದಕ್ಷಿಣ ಕಾಶಿ ಎಂದು ಕರೆಯಲ್ಪಡುತ್ತದೆ.

ಈ ಸ್ಥಳವು ಹೊಯ್ಸಳ ರಾಜರ ನಿಯಂತ್ರಣದಲ್ಲಿತ್ತು ಮತ್ತು ವಿಷ್ಣುವರ್ಧನನ ಪತ್ನಿ ರಾಣಿ ಶಾಂತಲ ಅವರು ಈ ಬೆಟ್ಟದಲ್ಲಿ ಖಿನ್ನತೆಯಿಂದ ಅತ್ಮಹತ್ಯೆ ಮಾಡಿಕೊಂಡರು. ಏಕೆಂದರೆ ಅವಳು ತನ್ನ ಮಗುವಿಗೆ ಜನ್ಮ ನೀಡಲಿಲ್ಲ ಎಂಬ ಮಾನಸಿಕ ಖಿನ್ನತೆಯಿಂದ ಅವರು ಆತ್ಮಹತ್ಯೆ ಮಾಡಿಕೊಂಡರು. ಆದ್ದರಿಂದ ಈ ಸ್ಥಳವನ್ನು ಶಾಂತಲ ಡ್ರಾಪ್ ಎಂದು ಗುರುತಿಸಲಾಗಿದೆ.

16 ನೇ ಶತಮಾನದಲ್ಲಿ ಶಿವಪ್ಪನಾಯಕರಿಂದ ಈ ಗುಡ್ಡದ ಕೋಟೆಯನ್ನು ಕೆಡವಲಾಗಿತ್ತು. ಆದರೆ ಬೆಂಗಳೂರಿನ ಸಂಸ್ಥಾಪಕ ಮಾಗಡಿ ಕೆಂಪೇಗೌಡರಿಂದ ಈ ಕೋಟೆಯು ಮತ್ತೆ ಸುದಾರಿಸಿತು. ಮತ್ತು ಅವರು ಈ ಕೋಟೆಯಲ್ಲಿ ಅವರ ನಿಧಿ ಭಾಗವನ್ನು ಉಳಿಸಿಕೊಂಡರು.

ಗವಿಗಂಗಾಧರೇಶ್ವರ ದೇವಸ್ಥಾನದ ಸುತ್ತಲಿನ ನಂಬಿಕೆಗಳು

ಶಿವಲಿಂಗಕ್ಕೆ ತುಪ್ಪದಿಂದ ಅಭಿಷೇಕವನ್ನು ಮಾಡಿದಾಗ ತುಪ್ಪ ಬೆಣ್ಣೆಯಾಗುತ್ತದೆ ಎನ್ನುವುದು ಅಸಕ್ತಿದಾಯಕ ಪವಾಡ. ಅಭಿಷೇಕದ ಸಮಯದಲ್ಲಿ ಭಕ್ತರು ಆ ಪವಾಡವನ್ನು ನೋಡುತ್ತಾರೆ. ಬೆಣ್ಣೆಯಾಗುವ ತುಪ್ಪಕ್ಕೆ ಔಷಧೀಯ ಶಕ್ತಿ ಇದೆ ಮತ್ತು ಅನೇಕ ಖಾಯಿಲೆಗಳನ್ನು

ಗುಣಪಡಿಸಬಹುದು ಎಂದು ಹೇಳಲಾಗುತ್ತದೆ. ದಂತ ಕಥೆಯ ಪ್ರಕಾರ ಈ ದೇವಾಲಯದ ಗರ್ಭಗುಡಿಯಿಂದ ರಹಸ್ಯವಾದ ಸುರಂಗವಿದೆ.

## 2. ಸುಬ್ರಹ್ಮಣ್ಯ ದೇವಸ್ಥಾನ, ಘಾಟಿ ಸುಬ್ರಮಣ್ಯ

ಘಾಟಿ ಸುಬ್ರಹ್ಮಣ್ಯ ಬೆಂಗಳೂರು ಗ್ರಾಮೀಣ ಜಿಲ್ಲೆಯ ದೊಡ್ಡಬಳ್ಳಾಪುರದ ಬಳಿ ಇರುವ ಜನಪ್ರಿಯ ಯಾತ್ರಾ ಕೇಂದ್ರಗಳಲ್ಲಿ ಒಂದಾಗಿದೆ. ಘಾಟಿ ಸುಬ್ರಹ್ಮಣ್ಯ ಬೆಂಗಳೂರಿನಿಂದ 60 ಕಿ.ಮೀ ದೂರದಲ್ಲಿದೆ. ಇಲ್ಲಿನ ದೇವಾಲಯವು ಶ್ರೀ ಸುಬ್ರಮಣ್ಯ ಮತ್ತು ಶ್ರೀ ಲಕ್ಷ್ಮಿ ನರಸಿಂಹರಿಗೆ ಅರ್ಪಿತವಾಗಿದೆ. ಇದು ಒಂದು ಉದ್ಭವ ಮೂರ್ತಿ ಮತ್ತು 600 ವರ್ಷಗಳ ಇತಿಹಾಸ ಹೊಂದಿದೆ. ಏಳು ತಲೆಯ ನಾಗರಹಾವು ಹೊಂದಿರುವ ಶ್ರೀ ಸುಬ್ರಹ್ಮಣ್ಯ ಸ್ವಾಮಿಯು ಪೂರ್ವಕ್ಕೆ ಮತ್ತು ಶ್ರೀ ಲಕ್ಷ್ಮಿ ನರಸಿಂಹ ಸ್ವಾಮಿಯು ಒಂದೇ ವಿಗ್ರಹದಲ್ಲಿ ಪಶ್ಚಿಮಕ್ಕೆ ಮುಖ ಮಾಡಿದ್ದಾರೆ. ಕನ್ನಡಿಯ ಮೂಲಕ ಹಿಂಭಾಗದಲ್ಲಿ ಇರುವ ಶ್ರೀ ಲಕ್ಷ್ಮಿ ನರಸಿಂಹ ಸ್ವಾಮಿ ದರ್ಶನ ಪಡೆಯಬಹುದು.

ಕುಜ-ರಾಹು ಸಂಧಿ ಶಾಂತಿ, ನಾಗ ದೋಷ ನಿವಾರಣಾ ಶಾಂತಿ, ನಾಗ ಪ್ರತಿಷ್ಠೆ, ಆಶ್ಲೇಷ ಬಲಿ ಮುಂತಾದವು ಇಲ್ಲಿ ಪ್ರಮುಖ ಪೂಜೆಗಳು.

ದರ್ಶನ ಸಮಯ - ಬೆಳಿಗ್ಗೆ 6:30 AM ರಿಂದ ರಾತ್ರಿ 9:00 PM

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಘಾಟಿ ಸುಬ್ರಹ್ಮಣ್ಯ ಪುರವರಾಧೀಶ್ವರ ಶ್ರೀ ಲಕ್ಷ್ಮೀ ದೇವೀ ಸಮೇತ ಶ್ರೀ ನರಸಿಂಹ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಸಂಸಾರ ಘೋರಗಹನೇ ಚರತೋ ಮುರಾರೆ | ಮಾರೊಗ್ರಭೀಕರ
ಮೃಗ ಪ್ರವರಾರ್ಧಿತಸ್ಯ | ಆರ್ತಸ್ಯ ಮತ್ಸರ ನಿದಾಘನಿ ಪೀಡಿತಸ್ಯ |
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ||

ಶಕ್ತಿಹಸ್ತಂ ವಿರೂಪಾಕ್ಷಂ ಶಿಖಿವಾಹಂ ಷಡಾನನಂ |
ದಾರುಣಂ ರಿಪುರೋಗಘ್ನಂ ಭಾವಯೇ ಕುಕ್ಕುಟಧ್ವಜಂ ||

ಉತ್ಸವಗಳು - ಬ್ರಹ್ಮರಥೋತ್ಸವ, ನರಸಿಂಹ ಜಯಂತಿ, ಜಾನುವಾರು ಜಾತ್ರೆ

ಯಾತ್ರಿಕರ ಸೌಲಭ್ಯಗಳು - ಊಟ, ವಸತಿ, ಕುಡಿಯುವ ನೀರು, ಸ್ವಚ್ಛತೆ, ವಾಹನ ನಿಲುಗಡೆ, ಪಾದರಕ್ಷೆ ನಿಲುಗಡೆ, ರಕ್ಷಣೆ, ಭದ್ರತೆ, ತುರ್ತು ಚಿಕಿತ್ಸೆ, ಮತ್ತು ಇತರ ಸೌಲಭ್ಯಗಳನ್ನು ಒದಗಿಸಿದೆ.

ಜಾನುವಾರು ಜಾತ್ರೆ ಪ್ರತಿವರ್ಷ ಡಿಸೆಂಬರದಲ್ಲಿ ನಡೆಯುತ್ತದೆ.

## 3. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ, ದೇವನಹಳ್ಳಿ, ದೇವನಹಳ್ಳಿ ತಾಲ್ಲೂಕು
2. ಶ್ರೀ ಶನಿಮಹತ್ಮಾ ದೇವಸ್ಥಾನ, ಚಿಕ್ಕ ಮಧುರೆ, ದೊಡ್ಡಬಳ್ಳಾಪುರ ತಾಲ್ಲೂಕು
3. ಶ್ರೀ ಕೃಷ್ಣ ದೇವಸ್ಥಾನ, ಮಕಳೀದುರ್ಗ, ದೊಡ್ಡಬಳ್ಳಾಪುರ ತಾಲ್ಲೂಕು
4. ವಿಶ್ವ ಶಾಂತಿ ಆಶ್ರಮ, ಅರಸಿನಕುಂಟೆ, ನೇಲಮಂಗಲ ತಾಲ್ಲೂಕು
5. ದಕ್ಷಿಣಮ್ನಾಯ ಶಿವಗಂಗ ಶಾರದ ಪೀಠ, ಶಿವಗಂಗೆ, ನೇಲಮಂಗಲ ತಾಲ್ಲೂಕು
6. ಶ್ರೀ ಸೋಮೇಶ್ವರ ದೇವಸ್ಥಾನ, ಗಂಗಾವರ, ಹೊಸಕೋಟೆ ತಾಲ್ಲೂಕು

# 10. ಬೆಂಗಳೂರು ನಗರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಬೆಂಗಳೂರು ನಗರ ಜಿಲ್ಲೆ ಒಂದು ದಕ್ಷಿಣಬಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಕೋಲಾರ, ಬೆಂಗಳೂರು ಗ್ರಾಮಾಂತರ, ರಾಮನಗರ ಜಿಲ್ಲೆಗಳು ಹಾಗೂ ತಮಿಳುನಾಡು ಸುತ್ತುವರಿದಿವೆ. ಬೆಂಗಳೂರು ನಗರ ಜಿಲ್ಲಾ ಕೇಂದ್ರ. ಆನೇಕಲ್, ಬೆಂಗಳೂರು ಪೂರ್ವ, ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಯಲಹಂಕ ಎಂಬ 5 ತಾಲ್ಲೂಕುಗಳನ್ನು ಹೊಂದಿದೆ.

1. ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಬೆಂಗಳೂರು
2. ಕೆಂಪೇಗೌಡ ಪರಂಪರೆ ವಸ್ತು ಸಂಗ್ರಹಾಲಯ, ಬೆಂಗಳೂರು
3. ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕ ವಸ್ತು ಸಂಗ್ರಹಾಲಯ, ಬೆಂಗಳೂರು
4. ಎಚ್ಎಎಲ್ ಪರಂಪರೆ ಮತ್ತು ವೈಮಾನಿಕ ವಸ್ತು ಸಂಗ್ರಹಾಲಯ, ಬೆಂಗಳೂರು
5. ಕರ್ನಾಟಕ ಜಾನಪದ ವಸ್ತು ಸಂಗ್ರಹಾಲಯ, ಬೆಂಗಳೂರು
6. ಗಾಂಧಿ ಭವನ ವಸ್ತು ಸಂಗ್ರಹಾಲಯ, ಬೆಂಗಳೂರು
7. ಮದ್ರಾಸ ಸಪ್ಪರ್ಸ್ ವಸ್ತು ಸಂಗ್ರಹಾಲಯ, ಬೆಂಗಳೂರು
8. ನಿಮ್ಹಾನ್ಸ್ ಮಿದುಳು ವಸ್ತು ಸಂಗ್ರಹಾಲಯ ಬೆಂಗಳೂರು
9. ಕಾನೂನು ವಸ್ತು ಸಂಗ್ರಹಾಲಯ ಬೆಂಗಳೂರು
10. ಫಿಲಾಟೆಲಿಕ್ ವಸ್ತು ಸಂಗ್ರಹಾಲಯ ಬೆಂಗಳೂರು


BENGALURU URBAN DISTRICT
KARNATAKA
N
BANGALORE RURAL DISTRICT
BANGALORE RURAL DISTRICT
BANGALORE RURAL DISTRICT
TAMIL NADU STATE
BALGALORE
ANEKAL
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters

## 1. ಸೋಮೇಶ್ವರ ದೇವಸ್ಥಾನ, ಹಲಸೂರು

ರಾಜ್ಯದ ರಾಜಧಾನಿಯಲ್ಲಿರುವ ಹಲವು ಪುರಾತನ ಪ್ರಸಿದ್ಧ ದೇವಾಲಯಗಳ ಪೈಕಿ ಹಲಸೂರು (ಅಲಸೂರು) ಸೋಮೇಶ್ವರ ದೇವಾಲಯವೂ ಒಂದು. ಚೋಳರ ಕಾಲದ್ದೆಂದು ಹೇಳಲಾಗುವ ಈ ಶಿವದೇವಾಲಯವು, ನಂತರ ವಿಜಯನಗರಸಾಮ್ರಾಜ್ಯದ ಆಡಳಿತಕ್ಕೊಳಗಾಗಿದ್ದ ಕೆಂಪೇಗೌಡರ (ಎರಡನೇ ಕೆಂಪೇಗೌಡರು) ಕಾಲದಲ್ಲಿ ಮತ್ತೆ ಅಭಿವೃದ್ಧಿ ಕಂಡಿತೆಂದು ಹೇಳುತ್ತಾರೆ.

ಈ ದೇವಾಲಯದ ಪ್ರಮುಖ ದೇವರು ಶ್ರೀ ಸೋಮೇಶ್ವರ ಸ್ವಾಮಿ. ದೇವಾಲಯದ ಆವರಣದಲ್ಲಿ ಪರಿವಾರ ದೇವತೆಗಳಾದ ದಕ್ಷಿಣಾಭಿಮುಖ ಶ್ರೀ ಆಂಜನೇಯ ಸ್ವಾಮಿ, ಶ್ರೀ ವಿದ್ಯಾಗಣಪತಿ, ಶ್ರೀ ವಳ್ಳಿ, ದೇವಸೇನೆ ಸಮೇತ ಶ್ರೀ ಸುಬ್ರಹ್ಮಣ್ಯ ಸ್ವಾಮಿ, ನವಗ್ರಹ, ಚಂಡಿಕೇಶ್ವರ, ಬ್ರಹ್ಮ ದೇವರು, ಸರಸ್ವತಿ ದೇವಿ,ದುರ್ಗಾ ದೇವಿ ಹಾಗು ನಂದಿ ಮುಂತಾದ ದೇವತೆಗಳನ್ನು ಪ್ರತ್ಯೇಕ ಗುಡಿಗಳಲ್ಲಿ ಕಾಣಬಹುದಾಗಿದೆ.

## 2. ಆಂಜನೇಯ ದೇವಸ್ಥಾನ ರಾಗಿಗುಡ್ಡ

ರಾಗಿ ಬೆಳೆಯುತ್ತಿದ್ದ ಹೊಲವೊಂದಕ್ಕೆ ಬೈರಾಗಿಯೊಬ್ಬ ಭಿಕ್ಷೆ ಕೇಳಲು ಹೋಗಿದ್ದನಂತೆ. ಸಾಮಾನ್ಯವಾಗಿ ಕೈಹಿಡಿತವಿದ್ದ ಅತ್ತೆಯೊಬ್ಬಳು ಇಂಥ ಬೈರಾಗಿಗಳಿಗೆ ಒಂದೆರಡು ಮುಷ್ಟಿ ಮಾತ್ರರಾಗಿ ಕೊಡುತ್ತಿದ್ದಳಂತೆ. ಅತ್ತೆ ಇಲ್ಲದ ದಿನ ಬಂದ ಬೈರಾಗಿಗೆ, ಸೊಸೆ ಮೊರದ ತುಂಬ ರಾಗಿ ದಾನವಾಗಿ ನೀಡಿದ ಸಂದರ್ಭದಲ್ಲಿ ಅತ್ತೆಯ ಕಣ್ಣಿಗೆ ಬಿದ್ದು, ಅದನ್ನು ಆಕೆ ಮರುಕಸಿದಳಂತೆ. ಬೈರಾಗಿ ರೂಪದಲ್ಲಿದ್ದ ದೇವರು ಪ್ರತ್ಯಕ್ಷನಾಗಿ ಇಡೀ ರಾಗಿಯ ಬಣವೆ ಕಲ್ಲಾಗಲಿ ಎಂದು ಶಾಪ ನೀಡಿದನಂತೆ. ಆ ಗುಡ್ಡ ಹಾಗೂ ಸುತ್ತಲ ಶಿಲಾ ಪ್ರದೇಶಕ್ಕೆ ರಾಗಿಗುಡ್ಡ ಎಂಬ ಹೆಸರು ಬಂತು ಎನ್ನುವ ನಂಬಿಕೆಯಿದೆ. 1969 ರಲ್ಲಿ ಪ್ರಮುಖವಾಗಿ ಹೆಚ್.ಎ.ಎಲ್. ಹಾಗೂ ಮೈಕೋ ಕಂಪನಿಗಳ ನೌಕರರು ರಾಗಿಗುಡ್ಡದ ಮೇಲಿದ್ದ ಮೂಲ ಆಂಜನೇಯನ ವಿಗ್ರಹಕ್ಕೆ ವ್ಯವಸ್ಥಿತ ಪೂಜೆ ನಡೆಯಲು ಅನುಕೂಲ ಮಾಡಿಕೊಟ್ಟರು. ಈಗ ಅದು ಸುಮಾರು 5 ಎಕರೆ ವಿಸ್ತೀರ್ಣದಲ್ಲಿ ಶ್ರೀ ಸೀತಾ ರಾಮ ಸ್ವಾಮಿ, ಶ್ರೀ ಗಣೇಶ, ಶ್ರೀ ರಾಜರಾಜೇಶ್ವರಿ ಮತ್ತು ನವಗ್ರಹಗಳ ದೊಡ್ಡ ದೇವಾಲಯಗಳ ಸಂಕೀರ್ಣವಾಗಿದೆ.

ದರ್ಶನ ಸಮಯ - ಬೆಳಿಗ್ಗೆ 08:00 ರಿಂದ 11:30 ಮತ್ತು ಸಂಜೆ 05:00 ರಿಂದ 08:30 ಶನಿವಾರ ಮತ್ತು ಭಾನುವಾರ ಕ್ರಮವಾಗಿ 12:30 ಮತ್ತು 09:00 ರವರೆಗೆ.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ರಾಗಿಗುಡ್ಡ ಪುರವರಾಧೀಶ್ವರ ಶ್ರೀ ಆಂಜನೇಯ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಮಂಗಳಂ ಜ್ಞಾನರೂಪಾಯ ಮಹಾವಿಶ್ವ ಸ್ವರೂಪಿಣೇ | ಪ್ರಣವಾರ್ಥ ಸ್ವರೂಪಾಯ ಪ್ರಾಣ ರೂಪಾಯ ಮಂಗಳಂ | ಶ್ರಿಯಃ ಪತಿಂ ಸದಾಚಾರ್ಯಂ ನತ್ವಾ ಸರ್ವಾರ್ಥಕಾಮದಂ | ಕಪೀಶಾರಾಧನಂ ವಕ್ಷ್ಯೇ ರಾಜ್ಯ ರಾಷ್ಟ್ರಾಭಿ ವೃಧ್ಧಿದಮ್ ||

ಮಹಾಮಂಗಳಾರತಿ - ಬೆಳಿಗ್ಗೆ 11:00 ರ ಸುಮಾರಿಗೆ, ಮತ್ತು ಸಂಜೆ 08:00 ರ ಸುಮಾರಿಗೆ.

ಭಕ್ತರ ಸೌಲಭ್ಯಗಳು - ಪಾದರಕ್ಷೆ ಆವಾರ, ಯಾಗಶಾಲೆ, ತ್ರಿಮೂರ್ತಿ ಸನ್ನಿಧಿ, ಸಭಾಗ್ರಹ, ಗೋಶಾಲೆ, ಪುಷ್ಕರಿಣಿ, ತೆರೆದ ಸಭಾಮಂಟಪ, ಪ್ರಸಾದ ವಿತರಣೆ, ಸಂಜೆಯಲ್ಲಿ ಪ್ರವಚನ, ಉಪನ್ಯಾಸ ಕಾರ್ಯಕ್ರಮಗಳು, ಮಧ್ಯಾಹ್ನ ಯೋಗ ತರಗತಿಗಳು, ಎಸ್ಸೆಸ್ಸೆಲ್ಸಿ, ಪಿಯುಸಿ, ಎಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಸಂಜೆ ಉಚಿತ ತರಬೇತಿಗಳು.

ಉತ್ಸವಗಳು - ಹನುಮಜ್ಜಯಂತಿ, ರಾಮನವಮಿ, ಗಣೇಶ ಚತುರ್ಥಿ

## 3. ಬನಶಂಕರಿ ಅಮ್ಮನವರ ದೇವಾಲಯ - ಕನಕಪುರ ರಸ್ತೆ

ಶ್ರೀ ಬನಶಂಕರಿ ಅಮ್ಮನವರ ದೇವಾಲಯವು ಕನಕಪುರ ರಸ್ತೆಯಲ್ಲಿದೆ. ಆಡು ಭಾಷೆಯಲ್ಲಿ ಬನ ಎಂದರೆ ಕಾಡು ಎಂದು ಹಾಗೂ ಶಂಕರಿ ಎಂದರೆ ಶಂಕರನ ಮಡದಿ ಅಥವ ಪಾರ್ವತಿ ಎಂದು ಅರ್ಥ ಬರುತ್ತದೆ. ಹಾಗೆಯೇ, ಬನಶಂಕರಿ ಅಮ್ಮನವರ ದೇವಾಲಯದ ಆರಾಧ್ಯ ದೈವವೂ ಪಾರ್ವತಿ ದೇವಿಯೇ.

ಈ ದೇವಾಲಯದ ಪ್ರಮುಖ ವೈಶಿಷ್ಟ್ಯವೆಂದರೆ, ದೇವಿಯ ಪೂಜೆಯನ್ನು, ಹಿಂದೂ ಸಂಪ್ರದಾಯದಲ್ಲಿ ಅಮಂಗಳ ಎಂದು ಪರಿಗಣಿಸುವ ರಾಹುಕಾಲದಲ್ಲಿ ಮಾಡಲಾಗುತ್ತದೆ. ಮಂಗಳವಾರ, ಶುಕ್ರವಾರ ಹಾಗೂ ಭಾನುವಾರಗಳಂದು ವಿಶೇಷ ಪೂಜೆಗಳು ನಡೆಯುತ್ತವೆ. ಬನಶಂಕರಿ ಅಮ್ಮನವರಿಗೆ ಅರ್ಧ ಕತ್ತರಿಸಿದ ನಿಂಬೆಹಣ್ಣಿನ ರಸ ತೆಗೆದು, ಅದರಲ್ಲಿ ಎಣ್ಣೆದೀಪವನ್ನು ಹಚ್ಚಿಡುವ ವಿಧಿ ಅನನ್ಯವಾದದ್ದು.

ಈ ದೇವಸ್ಥಾನವು ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಯ ಆಡಳಿತಕ್ಕೆ ಒಳಪಟ್ಟಿದೆ.

ದರ್ಶನ ಸಮಯ - ಬೆಳಿಗ್ಗೆ 6:00 ರಿಂದ 1:30 ಮತ್ತು ಸಂಜೆ 4:30 ರಿಂದ 8:30

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಬನಶಂಕರಿ ಪುರವರಾಧೀಶ್ವರೀ ಶ್ರೀ ಮಹಾಬಲೇಶ್ವರ ಸ್ವಾಮೀ ಸಮೇತ ಶ್ರೀ ಬನಶಂಕರೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಶ್ರೀವಲ್ಲಭಸೋದರೀ ಶ್ರಿತಜನಶ್ಚಿದ್ದಾಯಿನೀ ಶ್ರೀಮತೀ
ಶ್ರೀಕಂಠಾರ್ಧಶರೀರಗಾ ಶ್ರುತಿಲಸನ್ಮಾಣಿಕ್ಯತಾಟಂಕಕಾ |
ಶ್ರೀಚಕ್ರಾನ್ತರವಾಸಿನೀ ಶ್ರುತಿಶಿರಃ ಸಿದ್ಧಾನ್ತಮಾರ್ಗಪ್ರಿಯಾ
ಶ್ರೀವಾಣೀ ಗಿರಿಜಾತ್ಮಿಕಾ ಭಗವತೀ ಶಾಕಮ್ಬರೀ ಪಾತು ಮಾಮ್ ||

ಉತ್ಸವಗಳು - ದಸರಾ ಉತ್ಸವ, ವಾರ್ಷಿಕ ಜಾತ್ರೆ

ಭಕ್ತರ ಸೌಲಭ್ಯಗಳು - ಶೀಘ್ರ ದರ್ಶನ, ಯಾಗಶಾಲೆ, ಸಭಾಗ್ರಹ, ಪ್ರಸಾದ ವಿತರಣೆ, ದೀಪ ಹಚ್ಚುವ ಕಟ್ಟೆಗಳು, ಕುಡಿಯುವನೀರು, ಅನ್ನದಾನ, ವಾಹನ ನಿಲುಗಡೆ, ಪಾದರಕ್ಷೆ ಆವಾರ, ಶೌಚಾಲಯಗಳು,

## 4. ವೆಂಕಟೇಶ್ವರ ಸ್ವಾಮಿ ದೇವಸ್ಥಾನ, ವ್ಯಾಲಿಕಾವಲ್

ಶ್ರೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನವು ಮಲ್ಲೇಶ್ವರಂದ ವ್ಯಾಲಿಕಾವಲ್ ನಲ್ಲಿದೆ. ಶ್ರೀ ವೆಂಕಟೇಶ್ವರ ಈ ದೇವಾಲಯದ ಪ್ರಧಾನ ದೇವತೆ. ಆಂಧ್ರಪ್ರದೇಶದ ತಿರುಮಲ ತಿರುಪತಿ ದೇವಸ್ಥಾನಂ (ಟಿಟಿಡಿ) ಹೊಸದಾಗಿ ನಿರ್ಮಿಸಿದ ದೇವಾಲಯ ಇದು. ಈ ದೇವಾಲಯವನ್ನು 23 ಮೇ 2010 ರಲ್ಲಿ ನಿರ್ಮಿಸಲಾಗಿದೆ. ವೈಲಿಕವಲ್‌ನಲ್ಲಿರುವ ವೆಂಕಟೇಶ್ವರ ದೇವಸ್ಥಾನದಲ್ಲಿ ಏಳು ದೇವತೆಗಳಿವೆ - ಶ್ರೀ ವೆಂಕಟೇಶ್ವರ ಸ್ವಾಮಿ, ಶ್ರೀ ಪದ್ಮಾವತಿ ಅಮ್ಮನವರು, ಆಂಡಲ್ ಅಮ್ಮನವರು, ಶ್ರೀ ರಾಮ, ಸೀತೆ ದೇವಿ, ಲಕ್ಷ್ಮಣ, ಹನುಮಾನ್, ಗಣೇಶ, ರಾಧ, ಮತ್ತು ಕೃಷ್ಣ.

ಟಿಟಿಡಿಯ ದೇವಾಲಯ ವಾಸ್ತುಶಿಲ್ಪಿಗಳ ಮಾರ್ಗದರ್ಶನದಲ್ಲಿ ಈ ದೇವಾಲಯವನ್ನು ಆಗಮ ಶಾಸ್ತ್ರದ ಪ್ರಕಾರ ನಿರ್ಮಿಸಲಾಗಿದೆ. ಇಲ್ಲಿ ನಡೆಸಲಾಗುವ ವಿಧಿಗಳನ್ನು ವೈಖಾನಾಸ ಅಗಮ ಶಾಸ್ತ್ರಕ್ಕೆ ಅನುಗುಣವಾಗಿ ಮಾಡಲಾಗುತ್ತದೆ. ಬೆಂಗಳೂರು ಮತ್ತು ಕರ್ನಾಟಕದ ಭಕ್ತರು ದೇವಾಲಯಕ್ಕೆ ಭೇಟಿ ನೀಡಿ ತಿರುಮಲದಲ್ಲಿರುವಂತೆಯೇ ಅದೇ ಪೂಜೆಗಳು, ಸೇವಾಗಳನ್ನು ನಡೆಸಬಹುದು ಮತ್ತು ಭಗವಂತನ ಆಶೀರ್ವಾದವನ್ನು ಪಡೆಯಬಹುದು, ಇಲ್ಲಿ ಬೆಂಗಳೂರಿನಲ್ಲಿ.

ದರ್ಶನ ಸಮಯ - ಬೆಳಿಗ್ಗೆ 6:00 ರಿಂದ ರಾತ್ರಿ 8:00

ಪ್ರಣಾಮ ಮಂತ್ರ - ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥ ಪ್ರದಾಯಿನೇ |
ಶ್ರೀಮದ್‌ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ||

ಪ್ರಣಾಮ ಸ್ತೋತ್ರ - ಮುಖೇ ಚಾರುಹಾಸಂ ಕರೇ ಶಂಖಚಕ್ರಂ ಗಲೇ ರತ್ನಮಾಲಾಂ
ಸ್ವಯಂ ಮೇಘವರ್ಣಂ | ತಥಾ ದಿವ್ಯಶಸ್ತ್ರಂ ಪ್ರಿಯಂ ಪೀತವಸ್ತ್ರಂ ಧರಂತಂ ಮುರಾರಿಂ
ಭಜೇ ವೇಂಕಟೇಶಂ ||

ಉತ್ಸವಗಳು - ವಸಂತೋತ್ಸವ, ಬ್ರಹ್ಮೋತ್ಸವ, ವೈಕುಂಠ ಏಕಾದಶಿ, ರಥಸಪ್ತಮಿ, ಧನುರ್ಮಾಸ ಉತ್ಸವಗಳು

## 5. ಗವಿ ಗಂಗಾಧರೇಶ್ವರ ಸ್ವಾಮಿ ದೇವಸ್ಥಾನ ಗವಿಪುರ ಬಸವನಗುಡಿ

ಬೆಂಗಳೂರಿನ ಕೆಂಪೇಗೌಡನಗರ (ಗವಿಪುರಂ ಗುಟ್ಟಹಳ್ಳಿ) ಯಲ್ಲಿರುವ ಈ ದೇವಾಲಯ, ಬೆಂಗಳೂರಿನ ಬಸವನಗುಡಿ ವಲಯದಲ್ಲಿದೆ. ಶ್ರೀಗವಿಗಂಗಾಧರೇಶ್ವರ ಸ್ವಾಮಿ ದೇವಾಲಯ, ಭಾರತದಲ್ಲಿರುವ ಕೆಲವೇ ಕೆಲವು ಪ್ರಾಚೀನ ಗುಹಾಂತರ ದೇವಾಲಯಗಳಲ್ಲೊಂದು. ಹಲವು ವೈಶಿಷ್ಟ್ಯಗಳಿಂದ ಕೂಡಿದ, ಈ ಪ್ರಾಚೀನ ದೇವಾಲಯದ ವಾಸ್ತು ವಿನ್ಯಾಸ ಅತ್ಯಂತ ಮನಮೋಹಕವಾಗಿದೆ, ಬೆಂಗಳೂರಿನಲ್ಲಿರುವ ಗವಿಗಂಗಾಧರೇಶ್ವರ ದೇವಾಲಯದಲ್ಲಿ ಪ್ರತಿವರ್ಷ 'ಮಕರ ಸಂಕ್ರಾತಿಯ ದಿನ' ಸಂಜೆ ಸೂರ್ಯನ ಕಿರಣಗಳು ಲಿಂಗದ ಮುಂದಿರುವ ನಂದಿಯ ಕೊಂಬಿನಿಂದ ಹಾದು, ಶಿವಲಿಂಗವನ್ನು ಸ್ಪರ್ಶಿಸುತ್ತದೆ. ಈ ದೃಷ್ಯವನ್ನು ವೀಕ್ಷಿಸಲು ಸಾವಿರಾರು ಶ್ರದ್ಧಾಳುಗಳು ಬಹಳ ದೂರ ಪ್ರದೇಶಗಳಿಂದ ಬರುತ್ತಾರೆ. 'ಸ್ವಯಂಭು'ವೆಂದು ಪ್ರಸಿದ್ಧಿಪಡೆದ ಈಕ್ಷೇತ್ರದಲ್ಲಿ 'ಗೌತಮ ಮಹರ್ಷಿ'ಗಳು ಈ ಗುಹಾಂತರ ದೇವಾಲಯದಲ್ಲಿ ತಪಸ್ಸನ್ನು ಆಚರಿಸಿದರೆಂದು ಇತಿಹಾಸವಿದೆ. ಇಲ್ಲಿನ ಶಿವಲಿಂಗಕ್ಕೆ ತ್ರಿಕಾಲ ಪೂಜೆ ಸಲ್ಲಿಸುತ್ತಿದ್ದರೆಂದು ಸ್ಥಳ ಪುರಾಣ ಸಾರುತ್ತದೆ. ಹೀಗಾಗಿ ಇದಕ್ಕೆ ಗೌತಮ ಕ್ಷೇತ್ರ ಎಂದೂ ಹೆಸರು ಬಂದಿದೆ. ಈ ದೇವಾಲಯ ಗರ್ಭಗುಡಿಯ ಸುತ್ತ ಇರುವ ಗುಹಾ ಮಾರ್ಗದಲ್ಲಿ ಗೌತಮ ಮಹರ್ಷಿಗಳ ಹಾಗೂ ಭಾರದ್ವಾಜರ ಶಿಲಾಮೂರ್ತಿಗಳನ್ನೂ ಪ್ರತಿಷ್ಠಾಪಿಸಲಾಗಿದೆ. ಮಾರ್ಗದಲ್ಲಿ ಸಪ್ತ ಮಾತೃಕೆಯರಾದ 'ಬ್ರಾಹ್ಮೀ', 'ಮಾಹೇಶ್ವರಿ', 'ವಾರಾಹಿ', 'ಚಾಮುಂಡಿ', 'ವೈಷ್ಣವಿ' ಹಾಗೂ 'ಶ್ರೀದೇವಿ', 'ಭೂದೇವಿ'ಯ ವಿಗ್ರಹಗಳೂ ಇವೆ. ಸುಮಾರು ೧೦ ಸಾವಿರವರ್ಷಗಳ ಐತಿಹ್ಯವಿರುವ ಈದೇವಾಲಯದ ಶಿವಲಿಂಗ ದಕ್ಷಿಣಾಭಿಮುಖವಾಗಿರುವುದೇ ಇಲ್ಲಿಯ ವಿಶೇಷತೆಗಳಲ್ಲೊಂದು.

ಮತ್ತೊಂದು ವಿಶೇಷ, ಪಾರ್ವತಿದೇವಿಯು ಶಿವನ ಬಲಭಾಗದಲ್ಲಿ ಆಸೀನಳಾಗಿರುವುದು. ಈ ದೇವಾಲಯದ ವಿಶಾಲ ಪ್ರಾಂಗಣದಲ್ಲಿ ಬಹಳ ಅಪರೂಪವಾದ ಹಾಗೂ ಅತ್ಯಂತ ಸುಂದರವಾದ ಶಿಲಾರಚನೆಗಳಿವೆ. ಅತ್ಯಂತ ಸುಂದರ ಹಾಗೂ ರಮಣೀಯವಾದ ಈ ದೇವಾಲಯದ ಮುಂಭಾಗದಲ್ಲಿ ವಿಜಯನಗರ ಶೈಲಿಯ 14 ಕಂಬಗಳಿರುವ ಮಂಟಪವಿದೆ. ಈ ಪೈಕಿ 'ಎರಡು ಸೂರ್ಯಪಾನ', 'ಡಮರುಗ' ಹಾಗೂ 'ತ್ರಿಶೂಲದ ಎತ್ತರದ ಸ್ತಂಭಗಳು' ಈ ದೇವಾಲಯದ ಕೀರ್ತಿಗೆ ಕಳಶದಂತಿವೆ. ಈ ಗುಹಾಂತರ ದೇವಾಲಯದಲ್ಲಿ ಎರಡು

ಸುರಂಗ ಮಾರ್ಗಗಳಿದ್ದು, ಒಂದು ಸುರಂಗವು ವಿಶ್ವನಾಥನ ನೆಲೆವೀಡಾದ ಕಾಶಿಗೂ ಹೋಗುತ್ತದೆಂಬುದು ನಂಬಿಕೆ. ಇನ್ನೊಂದು ತುಮಕೂರು ರಸ್ತೆಯಲ್ಲಿರುವ ಶಿವಗಂಗೆಗೆ ಹೋಗುತ್ತದೆ. ಕಾರ್ತೀಕ ಮಾಸದ ಎಲ್ಲ ಸೋಮವಾರ ಹಾಗೂ ಶಿವರಾತ್ರಿಯ ದಿನ ಇಲ್ಲಿ ವಿಶೇಷ ಪೂಜೆಗಳು ಜರುಗುತ್ತವೆ. ದೇವಾಲಯದ ಪಕ್ಕದಲ್ಲೇ ಇರುವ ತಿಮ್ಮೇಶಪ್ರಭು ಉದ್ಯಾನದಲ್ಲಿ 'ಸಂಗೀತ, ನೃತ್ಯ ಕಾರಂಜಿ'ಯೂ ಇದೆ. ಪ್ರತಿ ರವಿವಾರದ ಸಂಜೆ ೭ರ ನಂತರ ಇಲ್ಲಿ 'ನೃತ್ಯಕಾರಂಜಿ'ಯನ್ನೂ ವೀಕ್ಷಿಸಲು ಎಲ್ಲ ಕಡೆಯಿಂದಲೂ ಜನರು ಬರುತ್ತಾರೆ.

ಪ್ರಣಾಮ ಸ್ತೋತ್ರ - ಗಂಗಾತರಂಗ ರಮಣೀಯ ಜಟಾಕಲಾಪಂ | ಗೌರೀ ನಿರಂತರ ವಿಭೂಷಿತ ವಾಮಭಾಗಂ | ನಾರಾಯಣ ಪ್ರಿಯಮನಂಗ ಮದಾಪಹಾರಂ | ವಾರಾಣಸೀಪುರಪತಿಂ ಭಜ ವಿಶ್ವನಾಥಂ ||

## 6. ಬೆಂಗಳೂರು ನಗರ ಜಿಲ್ಲೆಯ ಇತರ ದೇವಾಲಯಗಳು

1. ಅಕ್ಷಯನಗರ ಶ್ರೀ ಸುಬ್ರಹ್ಮಣ್ಯ ಮಠ,
2. ಅಗರ ವೃತ್ತ, ಶ್ರೀ ಜಗನ್ನಾಥ, ಶ್ರೀ ಅಂಜನೇಯ ದೇವಸ್ಥಾನ,
3. ಅತ್ತಿಬೆಲೆ ಶ್ರೀ ಪಾರ್ಶ್ವ ಸುಶೀಲ ಧಾಮ ದೇವಸ್ಥಾನ,
4. ಇಂದಿರಾನಗರ ಚಿನ್ಮಯ ಮಿಷನ್ ಶ್ರೀ ಕೃಷ್ಣ ದೇವಸ್ಥಾನ,
5. ಇಂದಿರಾನಗರ ಶ್ರೀ ಚೋಕ್ಕನಾಥಸ್ವಾಮಿ ದೇವಸ್ಥಾನ,
6. ಉತ್ತರಹಳ್ಳಿ ದ್ವಾದಶ ಜ್ಯೋತಿರ್ಲಿಂಗ ದೇವಸ್ಥಾನ, ಓಂಕಾರ ಬೆಟ್ಟಗಳು,
7. ಕನಕಪುರ ರಸ್ತೆ ಆರ್ಟ್ ಆಫ್ ಲಿವಿಂಗ್ ಆಶ್ರಮ, ಉದಯಪುರ,
8. ಕನಕಪುರ ರಸ್ತೆ ತ್ರಿಮೂರ್ತಿ ಆಧ್ಯಾತ್ಮ ಮಂದಿರ, ಉದಯಪುರ,
9. ಕನಕಪುರ ರಸ್ತೆ ಪಿರಮಿಡ್ ವ್ಯಾಲಿ ಇಂಟನ್ಯಾರ್ಷನಲ್ ಕೆಬೆಡ್ಡೋಡಿ,
10. ಕಲಾಸಿಪಾಳ್ಯ ಶ್ರೀ ಜಲಕಂಟೇಶ್ವರ ಸ್ವಾಮಿ ದೇವಸ್ಥಾನ,
11. ಕಾಡುಗೋಡಿ ಶ್ರೀ ಸತ್ಯ ಸಾಯಿ ಬಾಬಾ ಆಶ್ರಮ ದೇವಸ್ಥಾನ, ವೈಟ್‌ಫೀಲ್ಡ್
12. ಕುಮಾರ ಪಾರ್ಕ್ ಶ್ರೀ ಕನ್ಯಾಕಾಪರಮೇಶ್ವರಿ ದೇವಸ್ಥಾನ,
13. ಕುಮಾರಸ್ವಾಮಿ ಬಡಾವಣೆ ಶ್ರೀ ಬಲಮುರಿ ಗಣಪತಿ ದೇವಸ್ಥಾನ,
14. ಕೃಷ್ಣರಾಜೇಂದ್ರ ರಸ್ತೆ ಶ್ರೀ ಪ್ರಸನ್ನ ವೆಂಕಟರಮಣಸ್ವಾಮಿ ದೇವಾಲಯ ಕೋಟೆ,
15. ಕೆಂಗೇರಿ ಉಪನಗರ ಶ್ರೀ ರಾಘವೇಂದ್ರ ಸ್ವಾಮೀ ಮಠ,
16. ಕೆಂಗೇರಿ ಶ್ರೀ ಶಾರದಾಂಬಾ ದೇವಸ್ಥಾನ,
17. ಕೊಕ್ಸ್ ಟೌನ್ ಶ್ರೀ ವರಸಿದ್ಧಿ ವಿನಾಯಕ ದೇವಸ್ಥಾನ,
18. ಕೋರಮಂಗಲ ಶ್ರೀ ಕೋದಂಡರಾಮ ಸ್ವಾಮಿ ದೇವಸ್ಥಾನ, ಈಜಿಪುರ,
19. ಕೋರಮಂಗಲ ಶ್ರೀ ಪ್ರಸನ್ನ ಗಣಪತಿ ದೇವಸ್ಥಾನ,
20. ಗವಿಪುರ ಶ್ರೀ ಅಂಬಾ ಭವಾನಿ ದೇವಸ್ಥಾನ,

21. ಗಾಂಧೀನಗರ ಶ್ರೀ ಲಕ್ಷ್ಮೀ ಹಯಗ್ರೀವ ಸ್ವಾಮೀ ದೇವಸ್ಥಾನ,
22. ಗಿರಿನಗರ ಶ್ರೀ ರಾಘವೇಂದ್ರ ಸ್ವಾಮೀ ಮಠ,
23. ಗಿರಿನಗರ ಶ್ರೀ ರಾಮಾಶ್ರಮ, ರಾಮಚಂದ್ರಪುರ ಮಠ,
24. ಗಿರಿನಗರ ಶ್ರೀ ಕಾರ್ಯ ಸಿದ್ಧೀ ಹನುಮಂತ ದೇವಸ್ಥಾನ
25. ಚಾಮರಾಜಪೇಟೆ ಮಿಂಟೋ ಶ್ರೀ ಆಂಜನೇಯ ಸ್ವಾಮಿ ದೇವಸ್ಥಾನ,
26. ಚಿಕ್ಕಪೇಟೆ ನಂಜನಗೂಡು ಶ್ರೀ ರಾಘವವೇಂದ್ರ ಸ್ವಾಮೀ ಮಠ,
27. ಚಿಕ್ಕಪೇಟೆ ಶ್ರೀ ಧರ್ಮರಾಯ ಸ್ವಾಮೀ ದೇವಸ್ಥಾನ,
28. ಚಿಕ್ಕಪೇಟೆ ಶ್ರೀ ರಂಗನಾಥಸ್ವಾಮಿ ದೇವಸ್ಥಾನ,
29. ಚಿಕ್ಕಪೇಟೆ ಶ್ರೀ ಸುಗ್ರೀವ ವೆಂಕಟೇಶ್ವರ ದೇವಸ್ಥಾನ,
30. ಜಯನಗರ ನಂಜನಗೂಡು ಶ್ರೀ ರಾಘವವೇಂದ್ರ ಸ್ವಾಮೀ ಮಠ,
31. ಜಯನಗರ ಶ್ರೀ ಕೋದಂಡರಾಮ ಸ್ವಾಮಿ ದೇವಸ್ಥಾನ, 2 ನೇ ಬ್ಲಾಕ್,
32. ಜಯನಗರ ಶ್ರೀ ಗಣೇಶ ದೇವಸ್ಥಾನ, 4 ನೇ ಬ್ಲಾಕ್,
33. ಜಯನಗರ ಶ್ರೀ ಧರ್ಮನಾಥ ಶ್ವೇತಾಂಬರ ದೇವಸ್ಥಾನ, 4 ನೇ ಬ್ಲಾಕ್,
34. ಜೆ ಪಿ ನಗರ ಶ್ರೀ ಕಲ್ಯಾಣ ವೆಂಕಟೇಶ್ವರ ದೇವಸ್ಥಾನ, ಜೆ ಪಿ ನಗರ,
35. ಜೆ ಪಿ ನಗರ ಶ್ರೀ ಲಕ್ಷ್ಮಿ ವೆಂಕಟೇಶ್ವರ ದೇವಸ್ಥಾನ, ಜೆ ಪಿ ನಗರ,
36. ತಿಗಳರಪೇಟೆ ಶ್ರೀ ಧರ್ಮರಾಯ ಸ್ವಾಮಿ ದೇವಸ್ಥಾನ, ,
37. ತ್ಯಾಗರಾಜ ನಗರ ಶ್ರೀ ದತ್ತಾತ್ರೇಯ ದೇವಸ್ಥಾನ,
38. ತ್ಯಾಗರಾಜನಗರ ಶ್ರೀ ಅಭಯ ಲಕ್ಷ್ಮೀ ನರಸಿಂಹ ದೇವಸ್ಥಾನ (ಕಂಬದ ನರಸಿಂಹ)
39. ದೊಡ್ಡ ಬಾಣಸವಾಡಿ ಶ್ರೀ ಆಂಜನೇಯ ಸ್ವಾಮೀ ದೇವಸ್ಥಾನ,
40. ದೊಡ್ಡ ಬೊಮ್ಮಸಂದ್ರ ಶ್ರೀ ಚಾಮುಂಡೇಶ್ವರಿ ದೇವಸ್ಥಾನ,
41. ದೊಡ್ಡಮಾವಳ್ಳಿ ಶ್ರೀ ಆಂಜನೇಯ ಸ್ವಾಮೀ ದೇವಸ್ಥಾನ,

42. ದೋಮ್ಲೂರು ಶ್ರೀ ಸೂರ್ಯನಾರಾಯಣ ಸ್ವಾಮಿ ದೇವಸ್ಥಾನ, ದೋಮ್ಲೂರು
43. ನಗರ್ತಪೇಟೆ ಶ್ರೀ ಕಾಳಿಕಂಬ ಕಮಟೇಶ್ವರ ದೇವಸ್ಥಾನ,
44. ಪೀಣ್ಯ ಶ್ರೀ ಶ್ರೀನಿವಾಸ ಶ್ರೀ ರಾಘವೇಂದ್ರ ಸ್ವಾಮೀ ಮಠ,
45. ಬನಶಂಕರಿ ಶ್ರೀ ದೇವಗಿರಿ ವೆಂಕಟೇಶ್ವರ ದೇವಸ್ಥಾನ, 2 ನೇ ಹಂತ,
46. ಬನಶಂಕರಿ ಶ್ರೀ ಧರ್ಮಗಿರಿ ಮಂಜುನಾಥ ದೇವಸ್ಥಾನ, 2 ನೇ ಹಂತ,
47. ಬನಶಂಕರಿ ಶ್ರೀ ಬನಗಿರಿ ವರಸಿದ್ಧಿ ವಿನಾಯಕ ದೇವಸ್ಥಾನ, 3 ನೇ ಹಂತ,
48. ಬನ್ನೇರುಘಟ್ಟ ರಸ್ತೆ ಬ್ರಹ್ಮಕುಮಾರಿಯರ ರಾಜ ಯೋಗ ಭವನ, ಗೊಟ್ಟಿಗೆರೆ,
49. ಬನ್ನೇರುಘಟ್ಟ ರಸ್ತೆ ಶ್ರೀ ಮೀನಾಕ್ಷಿ ಸುಂದರೇಶ್ವರ ದೇವಸ್ಥಾನ, ಹುಳಿಮಾವು,
50. ಬನ್ನೇರುಘಟ್ಟ ರಸ್ತೆ ಶ್ರೀ ರಾಮಲಿಂಗೇಶ್ವರ ಗುಹೆ ದೇವಾಲಯ, ಹುಳಿಮಾವು,
51. ಬನ್ನೇರುಘಟ್ಟ ಶ್ರೀ ಚಂಪಕಧಾಮ ಸ್ವಾಮಿ ಮತ್ತು ಶ್ರೀ ಲಕ್ಷ್ಮಿ ನರಸಿಂಹ ದೇವಸ್ಥಾನ, ಬನ್ನೇರುಘಟ್ಟ, (ಎಂಡಿಕೆ),
52. ಬಸವನಗುಡಿ ಶ್ರೀ ಉತ್ತರಾದಿ ಮಠ,
53. ಬಸವನಗುಡಿ ಶ್ರೀ ಕಾರಂಜಿ ಆಂಜನೇಯ ಸ್ವಾಮೀ ದೇವಸ್ಥಾನ,
54. ಬಸವನಗುಡಿ ಶ್ರೀ ಗೋವರ್ಧನ ಕ್ಷೇತ್ರ ದೇವಾಲಯ, ಬಸವನಗುಡಿ ರಸ್ತೆ,
55. ಬಸವನಗುಡಿ ಶ್ರೀ ದೊಡ್ಡ ಗಣಪತಿ ದೇವಸ್ಥಾನ, ಬಸವನಗುಡಿ ರಸ್ತೆ (ಎಂಡಿಕೆ),
56. ಬಸವನಗುಡಿ ಶ್ರೀ ದೊಡ್ಡ ಬಸವಣ್ಣ ದೇವಸ್ಥಾನ,
57. ಬಸವನಗುಡಿ ಶ್ರೀ ಮಲ್ಲಿಕಾರ್ಜುನ ಸ್ವಾಮಿ ದೇವಸ್ಥಾನ, ಬಸವನಗುಡಿ (ಎಂಡಿಕೆ),
58. ಬಸವನಗುಡಿ ಶ್ರೀ ರಾಮಕೃಷ್ಣ ಮಠ ಬಸವನಗುಡಿ ರಸ್ತೆ,
59. ಬಸವನಗುಡಿ ಶ್ರೀ ರೇಣುಕಾ ಯೆಲ್ಲಮ್ಮ ದೇವಿ ದೇವಸ್ಥಾನ, ಕೃಷ್ಣ ರಾವ್ ಪಾರ್ಕ್,
60. ಬಸವನಗುಡಿ ಶ್ರೀ ಶೃಂಗೇರಿ ಶಂಕರ ಮಠ ದೇವಸ್ಥಾನ, ಶಂಕರಪುರಂ,
61. ಬಸವನಗುಡಿ ಶ್ರೀ ಸುಬ್ರಮಣ್ಯ ಸ್ವಾಮಿ ದೇವಸ್ಥಾನ, ಸಜ್ಜನ ರಾವ್ ವೃತ್ತ,

62. ಬಳೇಪೇಟೆ ಶ್ರೀ ಲಕ್ಷ್ಮಿ ನರಸಿಂಹ ಸ್ವಾಮಿ ದೇವಸ್ಥಾನ, (ಎಂಡಿಕೆ),
63. ಬಿ ಟಿ ಎಂ ಬಡಾವಣೆ ಶ್ರೀ ವಿಘ್ನೇಶ್ವರ ದೇವಸ್ಥಾನ,
64. ಬೇಗೂರು ಶ್ರೀ ಪಂಚಲಿಂಗ ನಾಗೇಶ್ವರ ದೇವಸ್ಥಾನ,
65. ಮತ್ತಿಕೆರೆ ಶ್ರೀ ಅಂಗಾರಕ ಗಣಪತಿ ದೇವಸ್ಥಾನ,
66. ಮಲ್ಲೇಶ್ವರ ಶ್ರೀ ಕನ್ಯಾಕಪರಮೇಶ್ವರಿ ದೇವಸ್ಥಾನ, 8 ನೇ ಅಡ್ಡರಸ್ತೆ,
67. ಮಲ್ಲೇಶ್ವರ ಶ್ರೀ ಕಾಡು ಮಲ್ಲೇಶ್ವರ ದೇವಸ್ಥಾನ, ಮಲ್ಲೇಶ್ವರ (ಎಂಡಿಕೆ),
68. ಮಲ್ಲೇಶ್ವರ ಶ್ರೀ ದಕ್ಷಿಣಮುಖಿ ನಂದಿ ದೇವಸ್ಥಾನ, ವಯ್ಯಾಲಿಕಾವಲ್,
69. ಮಲ್ಲೇಶ್ವರ ಶ್ರೀ ಮಹಾ ಗಣಪತಿ ದೇವಸ್ಥಾನ, ಈಸ್ಟ್ ಪಾರ್ಕ್ ರಸ್ತೆ,
70. ಮಲ್ಲೇಶ್ವರ ಶ್ರೀ ಮಾರಮ್ಮ ದೇವಾಲಯ, ಐಐಎಸ್ಸಿ ವೃತ್ತ,
71. ಮಲ್ಲೇಶ್ವರ ಶ್ರೀ ಯದುಗಿರಿ ಯತಿರಾಜ ಮಠ,
72. ಮಲ್ಲೇಶ್ವರ ಶ್ರೀ ಲಕ್ಷ್ಮಿ ನರಸಿಂಹ ಮತ್ತು ಶ್ರೀ ಗಂಗಮ್ಮ ದೇವಿ ದೇವಸ್ಥಾನ, ವಯ್ಯಾಲಿಕಾವಲ್, (ಎಂಡಿಕೆ)
73. ಮಲ್ಲೇಶ್ವರ ಶ್ರೀ ವೇಣುಗೋಪಾಲ ಕೃಷ್ಣ ದೇವಸ್ಥಾನ, 11 ನೇ ಅಡ್ಡರಸ್ತೆ,
74. ಮಲ್ಲೇಶ್ವರ ಶ್ರೀ ಶ್ರಿನಿವಾಸ ಶ್ರೀ ರಾಮಾಂಜನೆಯ ಶ್ರೀ ರಾಘವೇಂದ್ರ ಸ್ವಾಮೀ ದೇವಸ್ಥಾನ,
75. ಮಹಾಲಕ್ಷ್ಮೀ ಬಡಾವಣೆ ಮರಿ ತಿರುಪತಿ ಶ್ರೀ ಶ್ರೀನಿವಾಸ ದೇವಸ್ಥಾನ,
76. ಮಹಾಲಕ್ಷ್ಮೀ ಬಡಾವಣೆ ಶ್ರೀ ಪ್ರಸನ್ನ ವೀರಾಂಜನೆಯ ಸ್ವಾಮೀ ದೇವಸ್ಥಾನ,
77. ಮಹಾಲಕ್ಷ್ಮೀ ಬಡಾವಣೆ ಶ್ರೀ ರಾಧಾ ಕೃಷ್ಣ, ಶ್ರೀ ಬಲರಾಮ (ಇಸ್ಕಾನ್) ದೇವಸ್ಥಾನ,
78. ಮಾರುತಿ ನಗರ ಶ್ರೀ ವಿಜಯ ವೆಂಕಟೇಶ್ವರ ದೇವಸ್ಥಾನ,
79. ಮುರುಗೇಶಪಾಳ್ಯ ಶ್ರೀ ಶಿವ ದೇವಸ್ಥಾನ,
80. ಮೈಸೂರು ರಸ್ತೆ ಶ್ರೀ ಗಾಳೀ ಆಂಜನೇಯಸ್ವಾಮಿ ದೇವಸ್ಥಾನ, ಬ್ಯಾಟರಾಯನಪುರ,

81. ಮೈಸೂರು ರಸ್ತೆ ಶ್ರೀ ಪಂಚಮುಖಿ ಗಣೇಶ ದೇವಸ್ಥಾನ,

82. ಯಲಹಂಕ ಗೇಟ್ ಶ್ರೀ ಆಂಜನೇಯಸ್ವಾಮಿ ದೇವಾಲಯ

83. ರಾಘವೇಂದ್ರ ಕಾಲನೀ ಶ್ರೀ ಶ್ರೀಪಾದರಾಜ ಮಠ,

84. ರಾಜರಾಜೇಶ್ವರಿ ನಗರ ಶ್ರೀ ಕಾಲಭೈರವೇಶ್ವರ ದೇವಸ್ಥಾನ,

85. ರಾಜರಾಜೇಶ್ವರಿ ನಗರ ಶ್ರೀ ನಿಮಿಶಾಂಬ ದೇವಿ ದೇವಸ್ಥಾನ,

86. ರಾಜರಾಜೇಶ್ವರಿ ನಗರ ಶ್ರೀ ರಾಘವೇಂದ್ರ ಸ್ವಾಮೀ ಮಠ,

87. ರಾಜರಾಜೇಶ್ವರಿ ನಗರ ಶ್ರೀ ರಾಜರಾಜೇಶ್ವರಿ ದೇವಸ್ಥಾನ,

88. ರಾಜರಾಜೇಶ್ವರಿ ನಗರ ಶ್ರೀ ಲಕ್ಷ್ಮೀ ವೆಂಕಟೇಶ್ವರ ದೇವಸ್ಥಾನ,

89. ರಾಜರಾಜೇಶ್ವರಿ ನಗರ ಶ್ರೀ ಷಣ್ಮುಖ ದೇವಸ್ಥಾನ, ಶೃಂಗಗಿರಿ

90. ರಾಜಾಜಿನಗರ ಶ್ರೀ ಕೈಲಾಸ ವೈಕುಂಠ ಮಹಾಕ್ಷೇತ್ರ ದೇವಸ್ಥಾನ,

91. ರಾಜಾಜಿನಗರ ಶ್ರೀ ರಾಘವೇಂದ್ರ ಮೃತ್ತಿಕಾ ದೇವಸ್ಥಾನ,

92. ರಾಮೋಹಳ್ಳಿ ಶ್ರೀ ಮುಕ್ತಿನಾಗ ದೇವಸ್ಥಾನ,

93. ರಾಮೋಹಳ್ಳಿ ಶ್ರೀ ಶ್ರೀನಿವಾಸ ಸಾಲಿಗ್ರಾಮ ದೇವಸ್ಥಾನ,

94. ವಸಂತನಗರ ಶ್ರೀ ಸಂಪಂಗಿರಾಮ ಸ್ವಾಮಿ ದೇವಸ್ಥಾನ, (ಎಂಡಿಕೆ),

95. ವಸಂತಪುರ ಶ್ರೀ ಇಸ್ಕಾನ್ ರಾಧಾ ಕೃಷ್ಣಚಂದ್ರ ದೇವಸ್ಥಾನ, ಕನಕಪುರ ರಸ್ತೆ

96. ವಸಂತಪುರ ಶ್ರೀ ವಸಂತವಲ್ಲಭರಾಯ, ಶ್ರೀ ಭವಾನಿ ಶಂಕರ ದೇವಾಲಯ,

97. ವಸಂತಪುರ ಶ್ರೀ ಶ್ರೀಧರ ಸ್ವಾಮಿ ಪಾದುಕಾ ಮಂದಿರ

98. ವಸಂತಪುರ ಶ್ರೀ ಶ್ರೀನಿವಾಸ ದೇವಸ್ಥಾನ, ದೇವರಕರೆ,

99. ವಿದ್ಯಾರಣ್ಯಪುರ ಶ್ರೀ ಕಾಳಿಕಾ ದುರ್ಗಾಪರಮೇಶ್ವರಿ ದೇವಸ್ಥಾನ,

100. ಶೇಷಾದ್ರಿಪುರ ನಂಜನಗೂಡು ಶ್ರೀ ರಾಘವವೇಂದ್ರ ಸ್ವಾಮೀ ಮಠ,

101. ಶ್ರಿನಿವಾಸ ನಗರ ಶ್ರೀ ಲಕ್ಷ್ಮೀ ವೆಂಕಟೇಶ್ವರ ದೇವಸ್ಥಾನ,

102. ಸಿ ವಿ ರಾಮನ್ ನಗರ ಶ್ರೀ ವೀರಾಂಜನೆಯ ಸ್ವಾಮೀ ದೇವಸ್ಥಾನ, ಜಿ ಎಂ ಪಾಳ್ಯ,

103. ಹನುಮಂತ ನಗರ ಶ್ರೀ ಕುಮಾರ ಸ್ವಾಮಿ ದೇವಸ್ಥಾನ, (ಎಂಡಿಕೆ),

104. ಹನುಮಂತ ನಗರ ಶ್ರೀ ರಾಮಂಜನೇಯ ಗುಡ್ಡ ದೇವಸ್ಥಾನ, (ಎಂಡಿಕೆ),

105. ಹಲಸೂರು ಶ್ರೀ ಗುರು ಸಿಂಗ್ ಸಭಾ,

106. ಹಲಸೂರು ಶ್ರೀ ರಾಮಕೃಷ್ಣ ಮಠ,

107. ಹಲಸೂರು ಶ್ರೀ ಸುಬ್ರಹ್ಮಣ್ಯ ಸ್ವಾಮೀ ದೇವಸ್ಥಾನ,

## 7. ಬೆಂಗಳೂರಿನಿಂದ ಪ್ರವಾಸ ಮಾರ್ಗ ಸೂಚಿ

1. ಕೇಂದ್ರ - ಬೆಂಗಳೂರು ಸ್ಥಳೀಯ, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಇಸ್ಕಾನ್ ದೇವಾಲಯ >> ಪ್ರಸನ್ನ ವೀರಾಂಜನೆಯ ದೇವಸ್ಥಾನ >> ರಾಜರಾಜೇಶ್ವರಿ ದೇವಸ್ಥಾನ >> ಬನ್ನೇರಘಟ್ಟ >> ಶ್ರೀ ವಿಶ್ವೇಶ್ವರಯ್ಯ ವಿಜ್ಞಾನ ವಸ್ತು ಸಂಗ್ರಹಾಲಯ >> ಪ್ಲಾನೆಟೋರಿಯಂ >> ಕಬ್ಬನ್ ಪಾರ್ಕ್, ವಿಧಾನ ಸೌಧ ಮತ್ತು ಹೈಕೋರ್ಟ್.
2. ಕೇಂದ್ರ - ಬೆಂಗಳೂರು ಸ್ಥಳೀಯ, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 7:00, ವೀಕ್ಷಣೆ - ಬನಶಂಕರಿ ದೇವಸ್ಥಾನ >> ನಂದಿ ದೇವಾಲಯ >> ದೋಡ್ಡ ಗಣಪತಿ ದೇವಸ್ಥಾನ >> ಟಿಪ್ಪು ಸುಲ್ತಾನರ ಅರಮನೆ >> ಕೋಟೆ ವೆಂಕಟ್ರಮಣ ಸ್ವಾಮಿ ದೇವಸ್ಥಾನ >> ಲಾಲ್‌ಬಾಗ್ ಬಟಾನಿಕಲ್ ಗಾರ್ಡನ್ >> ಬೆಂಗಳೂರು ಅರಮನೆ.
3. ಕೇಂದ್ರ - ಬೆಂಗಳೂರು ಸ್ಥಳೀಯ, ಸಮಯ - ಬೆಳಿಗ್ಗೆ 8:00 ರಿಂದ ಸಂಜೆ 9:00, ವೀಕ್ಷಣೆ - ಎಂಟಿಆರ್‌ನಲ್ಲಿ ಬೆಳಗಿನ ಉಪಾಹಾರ >> ಲಾಲ್‌ಬಾಗ್ ಬಟಾನಿಕಲ್ ಗಾರ್ಡನ್ಸ್, >> ದೋಡ್ಡ ಗಣಪತಿ ದೇವಸ್ಥಾನ, ಬುಲ್ ಟೆಂಪಲ್ ಮತ್ತು ಬಗಲ್ ರಾಕ್, >> ಗವಿ ಗಂಗಾಧರೇಶ್ವರ ದೇವಸ್ಥಾನ >> ಮಧ್ಯಾಹ್ನ ಕಾಮತ್ ರೆಸ್ಟೋರೆಂಟ್‌ನಲ್ಲಿ ಊಟ >> ಟಿಪ್ಪುವಿನ ಬೇಸಿಗೆ ಅರಮನೆ ಮತ್ತು ಟಿಪ್ಪು ಕೋಟೆಯನ್ನು ಪರಿಶೀಲಿಸಿ, >> ಬೆಂಗಳೂರು ಅರಮನೆ >> ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್

(ಎನ್‌ಜಿಎಂಎ) > > ಕಬ್ಬನ್ ಪಾರ್ಕ್ >> ವಿಧಾನ ಸೌಧ ಮತ್ತು ಹೈಕೋರ್ಟ್ >> ಮೈಕ್ರೊ ಬ್ರೂವರಿಯಲ್ಲಿ ಬಿಯರ್ ಕುಡಿಯಿರಿ

4. ಕಾಲ್ನಡಿಗೆಯಲ್ಲಿ ಬಸವನಗುಡಿ - ಲಾಲ್‌ಬಾಗ್ ಬಟಾನಿಕಲ್ ಗಾರ್ಡನ್ >> ಶಂಕರ ಮಠ >> ಗಾಂಧಿ ಬಜಾರ >> ರಾಮಕೃಷ್ಣ ಮಠ >> ಗವಿ ಗಂಗಾಧರೇಶ್ವರ ಗುಹೆ ದೇವಾಲಯ >> ಬಿಗ್ ಬುಲ್ ಟೆಂಪಲ್ / ದೋಡ್ಡ ಗಣೇಶನ ಗುಡಿ >> ಬ್ಯೂಗಲ್ ರಾಕ್ ಪಾರ್ಕ್ >> ಎಂಟಿಆರ್ >> ಲಾಲ್‌ಬಾಗ್ ಬೊಟಾನಿಕಲ್ ಗಾರ್ಡನ್
5. ಕಾಲ್ನಡಿಗೆಯಲ್ಲಿ ಮಲ್ಲೇಶ್ವರ - ಸಾಂಕಿ ಸರೋವರ >> ಕಾಡು ಮಲ್ಲಿಕರ್ಜುನ ದೇವಸ್ಥಾನ >> ದಕ್ಷಿಣಾಮುಖಾ ನಂದಿ ತೀರ್ಥ ಕಲ್ಯಾಣಿ ಕ್ಷೇತ್ರ >> ಶ್ರೀ ಸಾಗರ >> ವೇಣುಗೋಲಸ್ವಾಮಿ ದೇವಸ್ಥಾನ >> ವುಡ್ ಮ್ಯೂಸಿಯಂ >> ಸ್ಯಾಂಕಿ ಸರೋವರ
6. ಕಾಲ್ನಡಿಗೆಯಲ್ಲಿ ಕೆ ಆರ್ ಮಾರುಕಟ್ಟೆ - ಕೋಟೆ ಪ್ರೌಢಶಾಲೆ >> ಕೋಟೆ ವೆಂಕಟರಮಣಸ್ವಾಮಿ ದೇವಸ್ಥಾನ >> ಮಿಂಟೋ ಆಂಜನೇಯ ಮತ್ತು ಕಣ್ಣಿನ ಆಸ್ಪತ್ರೆ >> ಸೇಂಟ್ ಲ್ಯೂಕ್ ಚರ್ಚ್ >> ಟಿಪ್ಪು ಸುಲ್ತಾನ್ ಅರಮನೆ >> ವಾಣಿ ವಿಲಾಸ ಆಸ್ಪತ್ರೆ >> ವಿಕ್ಟೋರಿಯಾ ಆಸ್ಪತ್ರೆ >> ಬೆಂಗಳೂರು ಕೋಟೆ >> ಕೋಟೆ ಪ್ರೌಢಶಾಲೆ

7. ಸಪ್ತಾ ಕ್ಷೇತ್ರ ದರ್ಶನ ಪ್ರವಾಸವು ಕರ್ನಾಟಕದ 7 ಪವಿತ್ರ ಸ್ಥಳಗಳನ್ನು ಒಳಗೊಂಡಿದೆ - ಉಡುಪಿ ಕೃಷ್ಣ ದೇವಸ್ಥಾನ, ಕೊಲ್ಲೂರು ಮೂಕಂಬಿಕಾ, ಶೃಂಗೇರಿ ಶರದಾಂಬಾ, ಹೊರನಾಡು ಅನ್ನಪೋರ್ನೇಶ್ವರಿ, ಧರ್ಮಸ್ಥಳ ಮಂಜುನಾಥ, ಕುಕ್ಕೆ ಸುಬ್ರಮಣ್ಯ.

**ದಿನ 01: ಬೆಂಗಳೂರು – ಹೊರನಾಡು,** ಬೆಂಗಳೂರಿನಿಂದ ಹೊರಟು, ಹಳೆಬೀಡು ಹೊಯ್ಸಳೇಶ್ವರ ದೇವಸ್ಥಾನ, ಬೇಲೂರು ಚೆನ್ನಕೇಶವ ದೇವಸ್ಥಾನ, ಕಳಸ ಶ್ರೀ ಕಲಶೇಶ್ವರ ದೇವಸ್ಥಾನ, ಹೊರನಾಡು ಶ್ರೀ ಅನ್ನಪೂರ್ಣೇಶ್ವರಿ ದೇವಸ್ಥಾನಕ್ಕೆ ಭೇಟಿ ನೀಡಿ ರಾತ್ರಿ ತಂಗುವುದು.

**ದಿನ 02: ಶೃಂಗೇರಿ - ಕೊಲ್ಲೂರು – ಮುರ್ಡೇಶ್ವರ,** - ಬೆಳಿಗ್ಗೆ ಹೊರಡುವದು ಮತ್ತು ಶೃಂಗೇರಿ ಶ್ರೀ ಶಾರದಾಂಬ ದೇವಸ್ಥಾನ, ಅಗುಂಬೆ ದೃಶ್ಯಗಳು, ಸೋಮೇಶ್ವರ ಶ್ರೀ ವಿನಾಯಕ

ದೇವಸ್ಥಾನ, ಕೊಲ್ಲೂರು ಮೂಕಂಬಿಕಾ ದೇವಸ್ಥಾನ, ಮುರ್ಡೇಶ್ವರ ಶಿವ ದೇವಸ್ಥಾನ ಮತ್ತು ಮುರ್ಡೇಶ್ವರದಲ್ಲಿರುವ ಬೀಚ್ ಸಂದರ್ಶಿಸಿ ರಾತ್ರಿ ತಂಗುವುದು.

**ದಿನ 03: ಉಡುಪಿ**, ಬೆಳಿಗ್ಗೆ ಹೊರಡುವದು ಮತ್ತು ಕುಂಬಾಶಿ ಶ್ರೀ ವಿನಾಯಕ ದೇವಸ್ಥಾನ, ಕೋಟಾ ಅಮೃತೇಶ್ವರಿ ದೇವಸ್ಥಾನ, ಸಾಲಿಗ್ರಾಮ ಶ್ರೀ ಗುರುನಾರಸಿಂಹ ದೇವಸ್ಥಾನ, ಬನ್ನಂಜೆ 23 ಅಡಿ ಶನಿ ದೇವಸ್ಥಾನ, ಉಡುಪಿ ಶ್ರೀ ಕೃಷ್ಣ ದೇವಸ್ಥಾನ, ಶ್ರೀ ಅನಂತೇಶ್ವರ ದೇವಾಲಯ, ಶ್ರೀ ಚಂದ್ರಮೌಳೀಶ್ವರ ದೇವಸ್ಥಾನ, ಅಂಬಲಪಾಡಿ ಮಹಾಕಾಳಿ ದೇವಸ್ಥಾನ, ಪಾಜಕ ಕ್ಷೇತ್ರ, ಕುಂಜಾರುಗಿರಿ ದುರ್ಗಾಬೆಟ್ಟ, ಮಾಲ್ಪೆ ಬೀಚ್ ಸಂದರ್ಶಿಸಿ ರಾತ್ರಿ ಉಡುಪಿಯಲ್ಲಿ ತಂಗುವುದು.

**ದಿನ 04: ಧರ್ಮಸ್ಥಳ – ಕುಕ್ಕೆ ಸುಬ್ರಹ್ಮಣ್ಯ** - ಬೆಳಿಗ್ಗೆ ಹೊರಡುವದು ಮತ್ತು ಧರ್ಮಸ್ಥಳ ಮಂಜುನಾಥ ದೇವಸ್ಥಾನ ಮತ್ತು ಬಾಹುಬಲಿ ಪ್ರತಿಮೆ, ಸೌತಡ್ಕಾ ವಿನಾಯಕ ದೇವಸ್ಥಾನ ಮತ್ತು ಸುಬ್ರಮಣ್ಯ ಶ್ರೀ ಆದಿ ಮತ್ತು ಕುಕ್ಕೆ ಕಾರ್ತಿಕೇಯ ದೇವಸ್ಥಾನ ಸಂದರ್ಶಿಸಿ ರಾತ್ರಿ ಬೆಂಗಳೂರಿಗೆ ತೆರಳಿ ಬಿಡಿ.

8. ಬೆಂಗಳೂರು >> ತುರುವೆಕೆರೆ >> ಮಲ್ಲಘಟ್ಟ ಸರೋವರ >> ಥಂಡಗಾ >> ನೊಣವಿನಕೆರೆ >> ನಾಗಲಾಪುರ >> ಬೆಂಗಳೂರು

ತುರುವೆಕೆರೆಗೆ ಆಗಮಿಸಿ. ಪಟ್ಟಣದ ಮೂರು ಸುಂದರವಾದ ಹೊಯ್ಸಳ ದೇವಾಲಯ ಗಳಾದ ಶ್ರೀ ಚನ್ನಕೇಶವ, ಶ್ರೀ ಗಂಗಾಧರೇಶ್ವರ, ಮತ್ತು ಶ್ರೀ ಮೂಲೆ ಶಂಕರ ದೇವಾಲಯಗಳನ್ನು ಅನ್ವೇಷಿಸಿ. ಈ ಮೂರು ದೇವಾಲಯಗಳು ಒಂದಕ್ಕೊಂದು ಹತ್ತಿರದಲ್ಲಿವೆ. ಇವು ಸಣ್ಣ ದೇವಾಲಯಗಳು ಅವುಗಳನ್ನು ಅನ್ವೇಷಿಸಲು ಒಂದು ಗಂಟೆ ಸಮಯ ಸಾಕು. ಮುಂದಿನ ನಿಲುಗಡೆ ಮಲ್ಲಘಟ್ಟ ಸರೋವರ. ಇಲ್ಲಿ 15 ನಿಮಿಷಗಳನ್ನು ಕಳೆಯಿರಿ. ಸರೋವರದಲ್ಲಿ ಈಜುವುದು ಅಪಾಯ. ಮುಂದಿನ ನಿಲುಗಡೆ ಥಂಡಗಾ ಶ್ರೀ ಚನ್ನಕೇಶವ ದೇವಾಲಯ, ಥಂಡಗಾ ಸರೋವರ, ಇಲ್ಲಿ 20 ನಿಮಿಷಗಳನ್ನು ಕಳೆಯಿರಿ. ಮುಂದಿನ ನಿಲುಗಡೆ ನೊಣವಿನಕೆರೆ, ಸರೋವರ ಮತ್ತು ಶ್ರೀ ಬೇಟೆರಾಯಸ್ವಾಮಿ ದೇವಾಲಯ ವೀಕ್ಷಿಸಲು 20 ನಿಮಿಷ. ಮುಂದಿನ ನಿಲುಗಡೆ ನಾಗಲಾಪುರ ಶ್ರೀ ಚನ್ನಕೇಶವ ಮತ್ತು ಶ್ರೀ ಕೇದಾರೇಶ್ವರ ದೇವಾಲಯಗಳನ್ನು ವೀಕ್ಷಿಸಿ ಬೆಂಗಳೂರಿಗೆ ಮರಳಿ.

9. ಬೆಂಗಳೂರು >> ಅಂತರಗಂಗೆ >> ಕೋಲಾರ >> ಕೋಟಲಿಂಗೇಶ್ವರ ದೇವಸ್ಥಾನ >> ಬೆಂಗಳೂರು
10. ಬೆಂಗಳೂರು >> ಕನಕಪುರ >> ಮಳವಳ್ಳಿ >> ಬನ್ನುರು >> ಕರಿಘಟ್ಟ >> ಮಹದೇವಪುರ >> ಬೆಂಗಳೂರು
11. ಬೆಂಗಳೂರು >> ತಿಪ್ಪಗೊಂಡನಹಳ್ಳಿ ಜಲಾಶಯ >> ತಿರುಮಲೆ >> ಮಾಗಡಿ >> ಸಾವನದುರ್ಗ >> ರಾಮನಗರ >> ಬೆಂಗಳೂರು
12. ಬೆಂಗಳೂರು >> ಹೊಸಕೋಟೆ >> ಹೆಚ್ ಕ್ರಾಸ್ >> ಕೈವಾರ >> ಕೈಲಸಗಿರಿ >> ಹೊಸಕೋಟೆ >> ಬೆಂಗಳೂರು
13. ಬೆಂಗಳೂರು >> ರೇವಣ ಸಿದ್ದೇಶ್ವರ ಬೆಟ್ಟ >> ಅಪ್ರಮಯ ದೇವಸ್ಥಾನ >> ಶಿವಳ್ಳಿ / ಕದಂಬಂ ರೆಸ್ಟೋರೆಂಟ್ >> ಚನ್ನಪಟ್ಟಣ >> ಕೂಟಗಲ್ >> ಬೆಂಗಳೂರು
14. ಬೆಂಗಳೂರು >> ಶ್ರವಣಬೆಲಗೋಳ >> ಮಾರ್ಕೊನಹಳ್ಳಿ >> ಬೆಂಗಳೂರು
15. ಬೆಂಗಳೂರು >> ಕುಣಿಗಲ್ - ನಾಗಮಂಗಲ - ಮೆಲ್ಕೋಟೆ - ತೊನ್ನೂರು ಸರೋವರ - ಚನ್ನಪಟ್ಟಣ - ಬೆಂಗಳೂರು
16. ಬೆಂಗಳೂರು >> ಶಿವಗಂಗೆ >> ದೇವರಾಯನದುರ್ಗ >> ಮಂದಾರಗಿರಿ >> ಬೆಂಗಳೂರು
17. ಬೆಂಗಳೂರು >> ನಂದಿ ಬೆಟ್ಟಗಳು >> ಭೋಗಾನಂದೀಶ್ವರ ದೇವಸ್ಥಾನ >> ಮುದ್ದೇನಹಳ್ಳಿ >> ದೇವನಹಳ್ಳಿ >> ಬೆಂಗಳೂರು
18. ಬೆಂಗಳೂರು >> ಕನಕಪುರ >> ಮಳವಳ್ಳಿ >> ಗಗನಚುಕ್ಕಿ ಜಲಪಾತ >> ಭರಚುಕ್ಕಿ ಜಲಪಾತ >> ಮಧ್ಯರಂಗ ದೇವಾಲಯಗಳು >> ತಲಕಾಡು ದೇವಾಲಯಗಳು >> ಬೆಂಗಳೂರು
19. ಬೆಂಗಳೂರು >> ಗೊರವನಹಳ್ಳಿ >> ತೀತಾ ಜಲಾಶಯ >> ಕೊರಟಗೆರೆ >> ಮಧುಗಿರಿ ಬೆಟ್ಟ ಗೋಪಾಲಕೃಷ್ಣ ದೇವಾಲಯ >> ಸಿರಾ >> ಸೀಬಿ >> ತುಮಕೂರು >> ಬೆಂಗಳೂರು
20. ಬೆಂಗಳೂರು >> ರಾಮನಗರ >> ಚನ್ನಪಟ್ಟಣ >> ಮದ್ದೂರು >> ಮಂಡ್ಯ >> ಕೊಕ್ಕರೆಬೆಳ್ಳೂರು >> ಶ್ರೀರಂಗಪಟ್ಟಣ >> ರಂಗನತಿಟ್ಟು >> ಬೆಂಗಳೂರು

# 11. ಕೋಲಾರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಕೋಲಾರ ಒಂದು ದಕ್ಷಿಣಬಳನಾಡಿನ ಜಿಲ್ಲೆಯಾಗಿದೆ. ಕೋಲಾರ ನಗರವು ಜಿಲ್ಲಾ ಕೇಂದ್ರವಾಗಿದೆ. ಕೋಲಾರ ಜಿಲ್ಲೆಯು ಚಿಕ್ಕಬಳ್ಳಾಪುರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆ, ತಮಿಳುನಾಡಿನ ಕೃಷ್ಣಗಿರಿ ಮತ್ತು ವೆಲ್ಲೂರ್ ಜಿಲ್ಲೆಯಿಂದ ಸುತ್ತುವರಿದಿದೆ. ಈ ಜಿಲ್ಲೆಯು ಬಂಗಾರಪೇಟೆ, ಕೆ.ಜಿ.ಎಫ್, ಕೋಲಾರ, ಮಾಲೂರು, ಮುಳಬಾಗಿಲು, ಶ್ರೀನಿವಾಸಪುರ ಎಂಬ 6 ತಾಲ್ಲೂಕುಗಳನ್ನು ಹೊಂದಿದೆ.

ಪಾಲಾರ್, ಉತ್ತರ ಪಿನಾಕಿನಿ, ದಕ್ಷಿಣ ಪಿನಾಕಿನಿ ನದಿಗಳು ಈ ಜಿಲ್ಲೆಯಲ್ಲಿ ಹರಿದಿವೆ.


KOLARA DISTRICT
KARNATAKA
N
W
E
S
0
5
10
kilometers
SRINIVASAPURA
MULBAGAL
KOLAR
BANGARAPET
MALUR
KARNATAKA STATE
District Headquarter
Taluk Headquarter
District Boundary
Taluk Boundary
NH / SH
Metalled Road
Railway Line

## 1. ವೆಂಕಟೇಶ್ವರ ದೇವಸ್ಥಾನ, ಬಂಗಾರು ತಿರುಪತಿ

ಪುರಾಣ ಪ್ರಸಿದ್ಧ ಸ್ಥಳವಾದ ಬಂಗಾರು ತಿರುಪತಿಯು 108 ತಿರುಪತಿಗಳಲ್ಲಿ ಒಂದು ಎಂದು ಪ್ರತೀತಿ. ಚಿನ್ನದ ಗಣಿ ಪ್ರದೇಶವಿರುವ ಕೋಲಾರ ಜಿಲ್ಲೆಯಲ್ಲಿ ಈ ಪುಣ್ಯ ಕ್ಷೇತ್ರವಿರುವುದರಿಂದ ಇದಕ್ಕೆ `ಬಂಗಾರು ತಿರುಪತಿ' ಎಂದು ಹೆಸರು. ಹಾಗೆಯೇ ಇಲ್ಲಿ ಪೂಜಿಸಲ್ಪಡುವವನು ಬಂಗಾರು ತಿರುಪತಿ ಶ್ರೀನಿವಾಸ. ಬಂಗಾರು ಗಿರಿವಾಸ ಎಂದೂ ಕರೆಯುತ್ತಾರೆ. ಕೋಲಾರ ಜಿಲ್ಲೆ ಮುಳಬಾಗಲಿನಿಂದ 15 ಕಿ.ಮೀ. ಕ್ರಮಿಸಿದರೆ ಬಂಗಾರು ತಿರುಪತಿ ಶ್ರೀನಿವಾಸನ ದರ್ಶನ ನಿಮಗಾಗುತ್ತದೆ.

ಈ ದೇವಸ್ಥಾನದ ಸ್ಥಳ ಪುರಾಣ ಕುತೂಹಲದಾಯಕವಾಗಿದೆ. ಸಾಮಾನ್ಯವಾಗಿ ಎಲ್ಲ ಮಂದಿರಗಳಲ್ಲಿಯೂ ಮುಂದುಗಡೆ ಬಾಗಿಲು ಇರುತ್ತದೆ. ಆದರೆ ಇಲ್ಲಿ ಬಾಗಿಲೇ ಇಲ್ಲ. ಕಿಟಕಿಗಳಿಂದ ದರ್ಶನ. ಇದಕ್ಕೊಂದು ಪುರಾಣ ಸಂಗತಿ ಉಂಟು. ಇಲ್ಲಿ ಭೃಗು ಮಹರ್ಷಿಗಳು ತಪಸ್ಸು ಮಾಡುತ್ತಿದ್ದರಂತೆ. ಅವರ ಪಾದದಲ್ಲಿ ಇದ್ದ ಜ್ಞಾನನೇತ್ರ ಎಂಬ ಕಣ್ಣನ್ನು ಪರಮಾತ್ಮನು ವೈಕುಂಠದಲ್ಲಿ ತೆಗೆದುಬಿಡುತ್ತಾನೆ. ಆಗ ಋಷಿಗೆ ಜ್ಞಾನೋದಯವಾಗುತ್ತದೆ. “ಜಗತ್ ಸೃಷ್ಟಿಕರ್ತನಾದ ನಿನ್ನನ್ನು ಒದ್ದಿದ್ದರಿಂದ ಈ ಮಹಾ ಪಾಪ ಉಂಟಾಯಿತು. ನನ್ನ ಪಾಪ ಹೋಗಲಾಡಿಸಿ ಮೋಕ್ಷ ಕೊಡು” ಎಂದು ಬಹುವಾಗಿ ಬೇಡಿಕೊಳ್ಳುತ್ತಾರೆ. ಆಗ ಪರಮಾತ್ಮನು. “ಈ ಶೇಷಾಚಲ ಕ್ಷೇತ್ರದಲ್ಲಿ ತಪಸ್ಸು ಮಾಡಿಕೊಂಡಿರು. ನನ್ನ ಆರಾಧನೆ ಮಾಡು, ಮೋಕ್ಷ ಕೊಡುತ್ತೇನೆ” ಎಂದು ಆಶ್ವಾಸನೆ ನೀಡುತ್ತಾನೆ. ಈ ಹಿನ್ನೆಲೆಯಲ್ಲಿ ಸ್ವಾಮಿಯು ಇಲ್ಲಿ ಉದ್ಭವಿಸಿದ ಎಂದು ಪುರಾಣ ಹೇಳುತ್ತದೆ. ಭೃಗು ಮಹರ್ಷಿಗಳು ಇಲ್ಲಿ ತಪಸ್ಸು ಮಾಡಿಕೊಂಡು ಭಗವಂತನ ದರ್ಶನ ಪಡೆದರು.

ಮತ್ತೊಂದು ವಿಶೇಷವೆಂದರೆ ಇಲ್ಲಿರುವ ಕಿಟಕಿಗೆ ಆರು ರಂಧ್ರಗಳಿವೆ. ಮಾನವನ ಆರು ಗುಣಗಳಾದ - ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ -ಇವುಗಳನ್ನು ಅರಿಷಡ್‌ವರ್ಗ ಎಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಈ ಆರು ಗುಣಗಳನ್ನು ಬಿಟ್ಟು ಮನುಷ್ಯ ಬದುಕುವುದು ಕಷ್ಟ . ಅದಕ್ಕಾಗಿ ಪರಮಾತ್ಮ “ನನ್ನನ್ನು ನೋಡುವಾಗಲಾದರೂ ಎಲ್ಲವನ್ನೂ ಮರೆತು ಪೂಜಿಸು. ಒಳ್ಳೆಯ ಫಲವನ್ನು ಕೊಡುತ್ತೇನೆ” ಎನ್ನುತ್ತಾನೆ. ಇದರ ಸಂಕೇತವಾಗಿ ಆರು ರಂಧ್ರಗಳಿರುವ ಕಿಟಕಿಯ ಮೂಲಕ ಇಲ್ಲಿ ಭಗವಂತನ ದರ್ಶನ. ಉಡುಪಿಯಲ್ಲಿ ಕೃಷ್ಣನ ದರ್ಶನ ಮಾಡಿದಂತೆ. ಎಷ್ಟೇ ಭಕ್ತರು ಬರಲಿ, ಅವರೆಲ್ಲ ಈ ಕಿಟಕಿ ಮೂಲಕವೇ ದರ್ಶನ ಮಾಡಿಕೊಂಡು ಹೋಗಬೇಕು. ಇಲ್ಲಿ ವರ್ಷದಲ್ಲಿ ಮೂರು ಬಾರಿ ಜಾತ್ರೆ.

ಮಾಘ ಶುದ್ಧ ಪೂರ್ಣಿಮೆ, ಅಂದರೆ ಮಾರ್ಗಶಿರದಲ್ಲಿ ಬ್ರಹ್ಮೋತ್ಸವ ನಡೆಯುತ್ತದೆ. ವೈಶಾಖದಲ್ಲಿ ೯ ದಿವಸ ಮತ್ತು ಶ್ರಾವಣದಲ್ಲಿ ನಾಲ್ಕೂ ಶನಿವಾರ ವಿಶೇಷ ಪೂಜೆ ಮತ್ತು ಶಿವರಾತ್ರಿ ಸಮಯದಲ್ಲಿ ಜಾತ್ರೆ. ಈ ಎಲ್ಲ ವಿಶೇಷ ಸಂದರ್ಭಗಳಲ್ಲಿ ಸಹಸ್ರಾರು ಭಕ್ತರು ಪಾಲ್ಗೊಂಡು ಪುನೀತರಾಗುತ್ತಾರೆ.

ವಿಶೇಷ ದಿನಗಳಲ್ಲಿ ಭಗವಂತನ ವಿಗ್ರಹಕ್ಕೆ ಅಲಂಕರಿಸಲು ಬಂಗಾರದ ಆಭರಣಗಳಿವೆ. ಅದನ್ನು ತಾಲೂಕಿನ ಸರ್ಕಾರಿ ಖಜಾನೆಯಲ್ಲಿ ಸುರಕ್ಷಿತವಾಗಿ ಇಡಲಾಗುತ್ತದೆ ಮತ್ತು ವಿಶೇಷ ಪೂಜೆ ಇದ್ದಾಗ ತರಲಾಗುತ್ತದೆ.

ವಿಶೇಷ ಆಚರಣೆ - ಶ್ರಾವಣ ಮಾಸ, ಶಿವರಾತ್ರಿ, ವೈಕುಂಠ ಏಕಾದಶೀ.

ದರ್ಶನ ಸಮಯ - ಬೆಳಗ್ಗೆ 7:30 ರಿಂದ ಸಂಜೆ 7:30 ರವರೆಗೆ, ಯಾವುದೇ ಬಿಡುವು ಇಲ್ಲದೆ.

ಅಭಿಷೇಕ - ಬೆಳಗ್ಗೆ 8 ಗಂಟೆಗೆ. ಶನಿವಾರ ಮಾತ್ರ ಬೆಳಿಗ್ಗೆ 11 ಗಂಟೆಗೆ. ಅನಂತರ ಪ್ರಸಾದ ವಿನಿಯೋಗ. ಶನಿವಾರ, ಭಾನುವಾರ ಮತ್ತು ರಜಾ ದಿನ ಹಾಗೂ ವಿಶೇಷ ದಿನಗಳಲ್ಲಿ ಭಕ್ತರ ಸಂಖ್ಯೆ ಹೆಚ್ಚು.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಬಂಗಾರು ತಿರುಪತಿ ಪುರವರಾಧೀಶ್ವರ ಶ್ರೀ ಶ್ರೀದೇವಿ ಭೂದೇವೀ ಸಮೇತ ಶ್ರೀ ವೆಂಕಟೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಅಹೋ ನಿರ್ಮಲಂ ನಿತ್ಯಮಾಕಾಶರೂಪಂ ಜಗತ್ಕಾರಣಂ ಸರ್ವವೇದಾಂತವೇದ್ಯಂ | ವಿಭುಂ ತಾಪಸಂ ಸಚ್ಚಿದಾನಂದರೂಪಂ ಧರಂತಂ ಮುರಾರಿಂ ಭಜೇ ವೇಂಕಟೇಶಂ ||

## 2. ಪ್ರಸನ್ನ ವೆಂಕಟೇಶ ದೇವಸ್ಥಾನ, ಚಿಕ್ಕ ತಿರುಪತಿ

ಚಿಕ್ಕ ತಿರುಪತಿಯ ಶ್ರೀ ಪ್ರಸನ್ನ ವೆಂಕಟೇಶ್ವರ ಸ್ವಾಮಿ ದೇವಸ್ಥಾನವು ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನಲ್ಲಿದೆ. ಚೋಳರ ಕಾಲದಲ್ಲಿ ಇದರ ಜೀರ್ಣೋದ್ಧಾರವಾಗಿದೆಯೆಂದು ಹೇಳಲಾಗಿದೆ. ಪುರಾಣಗಳ ಪ್ರಕಾರ ಶಾಪಗ್ರಸ್ತ ಅಗ್ನಿಗೆ ಈ ಸ್ಥಳದಲ್ಲಿ ಪ್ರತ್ಯಕ್ಷನಾದ ವಿಷ್ಣುವು ಪ್ರಸನ್ನ ವೆಂಕಟೇಶ್ವರನ ರೂಪದಲ್ಲಿ ಅಭಯ ಪ್ರದಾನ ಮಾಡಿದನಂತೆ. ಆ ಕಥೆಯು ಹೀಗಿದೆ.

ಹಿಂದೆ ದ್ವಾಪರ ಯುಗದಲ್ಲಿ ಶ್ವೇತಕಿ ಎಂಬ ಮಹಾ ವೀರನಾದ ರಾಜನು ನೂರು ವರ್ಷಗಳ ಮಹಾಯಜ್ಞವನ್ನು ಮಾಡಿದಾಗ ಶಿವನ ಅನುಗ್ರಹದಿಂದ ಶಿವನ ಅವತಾರ ಸ್ವರೂಪಿಗಳಾದ ದೂರ್ವಾಸ ಮುನಿಗಳೇ ಋತ್ವಿಕರ ಸ್ಥಾನವನ್ನು ವಹಿಸಿದ್ದರು. ದೀರ್ಘಕಾಲ ನಡೆದ ಈ ಯಜ್ಞದಲ್ಲಿ ಹವಿಸ್ಸಿನ ರೂಪದಲ್ಲಿ ಅರ್ಪಿಸಿದ ತುಪ್ಪವನ್ನು ಸೇವಿಸಿ ಅಗ್ನಿಗೆ ಅಜೀರ್ಣವಾಯಿತು. ಅವನು ಬ್ರಹ್ಮನನ್ನು ಪ್ರಾರ್ಥಿಸಲು ನರ ನಾರಾಯಣರ ನೆರವಿನಿಂದ ಖಾಂಡವ ವನವನ್ನು ದಹಿಸಲು ಅವನ ವ್ಯಾಧಿಉಪಶಮನವಾಗುವುದೆಂದು ಹೇಳಿದನು. ಅಗ್ನಿಯು ಬದರೀನಾರಾಯಣನಿಂದ ಪಡೆದ ಚಕ್ರವನ್ನು ಶ್ರೀಕೃಷ್ಣನಿಗೂ, ವರುಣನಿಂದ ಪಡೆದ ಗಾಂಡೀವವನ್ನು ಅರ್ಜುನನಿಗೂ ಕೊಟ್ಟು ಶ್ವೇತಾಶ್ವ ಮತ್ತು ಹನುಮಧ್ವಜದಿಂದ ಸುಸಜ್ಜಿತವಾದ ರಥವನ್ನು ಅವರಿಗೆ ವಹಿಸಿ, ತಾನು ಖಾಂಡವ ವನವನ್ನು ದಹಿಸುವಾಗ ಇಂದ್ರನಿಂದ ಬರಬಹುದಾದ ಅಡಚಣೆಗಳನ್ನು ತಡೆಯಲು ಕೋರಿದನು. ಅದರಂತೆ ಅರ್ಜುನನು ಬಾಣಗಳ ಚಪ್ಪರವನ್ನೇ ಕಟ್ಟಿ ಇಂದ್ರ ಸುರಿದ ಮಳೆಯನ್ನು ತಡೆದನು ಹಾಗೂ ಖಾಂಡವ ವನದಿಂದ ಯಾವ ಪ್ರಾಣಿಯೂ ತಪ್ಪಿಸಿಕೊಂಡು ಹೋಗದಂತೆ ತಡೆದನು. ತಕ್ಷಕ ಎಂಬ ಸರ್ಪವು ತಪ್ಪಿಸಿಕೊಂಡು ಹೋಗುವ ಪ್ರಯತ್ನದಲ್ಲಿ ಮೈಯೆಲ್ಲ ಸುಟ್ಟುಕೊಂಡು ಅಗ್ನಿಗೆ ತೇಜೋಹೀನವಾಗುವಂತೆ ಶಾಪವನ್ನು ಕೊಟ್ಟಿತು. ಇದರಿಂದ ಲೋಕದಲ್ಲಿ ಯಜ್ಞ ಯಾಗಾದಿಗಳೇ ನಿಂತು ಹೋದವು. ದೇವಾದಿ ದೇವತೆಗಳು ತಮ್ಮ ಪಾಲಿನ ಹವಿರ್ಭಾಗ ಲಭಿಸದೆ ಕಂಗಾಲಾದರು. ಕೊನೆಗೆ ಅಗ್ನಿಯು ವಿಷ್ಣುವನ್ನು ಸಂಪ್ರೀತಿಗೊಳಿಸಲು ಉಗ್ರವಾದ ತಪಸ್ಸನ್ನು ಮಾಡಿದನು. ಆಗ ವಿಷ್ಣುವು ಪ್ರಸನ್ನ ವೆಂಕಟೇಶ್ವರನ ರೂಪದಲ್ಲಿ ಪ್ರತ್ಯಕ್ಷನಾಗಿ ಅಗ್ನಿಯ ಶಾಪ ವಿಮೋಚನೆ ಮಾಡಿದನು. ಹಾಗೆ ಚೈತ್ರ ಮಾಸದ ಪುಬ್ಬಾ ನಕ್ಷತ್ರವಿರುವ ದಿನದಂದು ಅಗ್ನಿಗೆ ಅಭಯ ನೀಡಿದ ಶುಭದಿನದಂದು ಚಿಕ್ಕ ತಿರುಪತಿಯಲ್ಲಿ ಬ್ರಹ್ಮ ರಥೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ.

ಚಿಕ್ಕ ತಿರುಪತಿಯನ್ನು ಪ್ರವೇಶಿಸುತ್ತಿದ್ದಂತೆಯೇ ಮಹಾದ್ವಾರವು ಕಾಣಿಸುತ್ತದೆ. ಮಹಾದ್ವಾರದ ಮುಂಭಾಗದಲ್ಲಿ ಕ್ಷೇತ್ರಪಾಲನಾದ ಆಂಜನೇಯನನ್ನು ಪ್ರತಿಷ್ಠಾಪಿಸಲಾಗಿದೆ. ಮಹಾದ್ವಾರವನ್ನು ದಾಟಿ ಸುಮಾರು ನೂರು ಮೀಟರ್ ದೂರದಲ್ಲಿ ದೇವಸ್ಥಾನದ ಭವ್ಯ ರಾಜಗೋಪುರವು ಕಾಣಿಸುತ್ತದೆ. ಮುಂದೆ ಸಾಗಿದರೆ ೩೫ ಅಡಿ ಎತ್ತರದ ಧ್ವಜಸ್ತಂಭವು ಭಕ್ತಾದಿಗಳನ್ನು ಆಕರ್ಷಿಸುತ್ತದೆ. ಮುಖಮಂಟಪವನ್ನು ದಾಟಿ ನವರಂಗವನ್ನು ಪ್ರವೇಶಿಸುತ್ತಿದ್ದಂತೆಯೇ ಗರ್ಭಗುಡಿಯಲ್ಲಿರುವ ಅತ್ಯಂತ ಸುಂದರವಾದ ಪ್ರಸನ್ನ ವೆಂಕಟೇಶ್ವರನ ದಿವ್ಯಮೂರ್ತಿಯು ಭಕ್ತರನ್ನು ಆನಂದಪರವಶಗೊಳಿಸುತ್ತದೆ. ಶ್ರೀದೇವಿ ಭೂದೇವಿಯರ ಸಂಗಡ ಒಂದೂವರೆ ಅಡಿ ಎತ್ತರದ ಪದ್ಮ ಪೀಠದ ಮೇಲೆ ನಿಂತಿರುವ ನಯನ ಮನೋಹರವಾದ ಮೂರೂವರೆ ಅಡಿ ಎತ್ತರದ ಪ್ರಸನ್ನ ವೆಂಕಟೇಶ್ವರನ ವಿಗ್ರಹವು ನಗುಮುಖದಿಂದಿದ್ದು ಭಕ್ತರ ಯಾತನೆಗಳನ್ನೆಲ್ಲ ನಿವಾರಣೆ ಮಾಡುವ ಅಭಯ ಮುದ್ರೆಯನ್ನು ತೋರುತ್ತಿದೆ. ಎಡಗೈ ಮೊಣಕಾಲಿನ ಕಡೆಗೆ ತೋರುತ್ತಿದ್ದು, ಭಗವಂತನ ಪಾದಪದ್ಮಗಳಲ್ಲಿ ಸಂಪೂರ್ಣ ಶರಣಾಗತನಾದವನಿಗೆ ಸಂಸಾರ ಸಾಗರದ ಕಷ್ಟ ಕಾರ್ಪಣ್ಯಗಳೆಲ್ಲ ಕೇವಲ ಮೊಣಕಾಲು ಮಟ್ಟದ ನೀರಿನ ಹಾಗೆ ಎಂದು ಸೂಚಿಸುತ್ತಿದ್ದಾರೆ.

ಪ್ರಾಚೀನವಾದ ಮತ್ತು ಅತ್ಯಂತ ಸುಂದರವಾಗಿ ಕೆತ್ತಲಾದ ಉತ್ಸವ ಮೂರ್ತಿಗಳನ್ನು ಸುಖನಾಸಿಯಲ್ಲಿ ಇರಿಸಲಾಗಿದೆ. ಬೆರಳ ಉಗುರುಗಳು ಕೂಡ ಸ್ಪಷ್ಟವಾಗಿ ಕಾಣುವಂತಹ ಕುಸುರಿ ಕೆಲಸವನ್ನು ಇಲ್ಲಿ ನೋಡಬಹುದು. ಈ ವಿಗ್ರಹಗಳ ಚೆಲುವನ್ನು ನೋಡಲು ಎರಡು ಕಣ್ಣುಗಳೂ ಸಾಲವು.

ವೈಖಾಸನ ಆಗಮದ ಪ್ರಕಾರ ಇಲ್ಲಿ ನಿತ್ಯ ಪೂಜಾ ಕೈಂಕರ್ಯಗಳು ನಡೆಯುತ್ತವೆ. ಪ್ರತಿನಿತ್ಯ ಬೆಳಗ್ಗೆ ಸುಪ್ರಭಾತ ಸ್ತೋತ್ರಗಳ ಮೂಲಕ, ಯೋಗನಿದ್ರೆಯಲ್ಲಿರುವ ಸ್ವಾಮಿಯನ್ನು ಎಚ್ಚರಗೊಳಿಸಲಾಗುತ್ತದೆ. ಬೆಳಗ್ಗೆ ಒಂಬತ್ತು ಗಂಟೆಗೆ ಮಹಾ ಮಂಗಳಾರತಿ ಮತ್ತು ಷೋಡಶೋಪಚಾರಗಳು ನಡೆಯುತ್ತವೆ. ಸಾಯಂಕಾಲ ಏಳು ಗಂಟೆಗೆ ಅರ್ಚನೆ ಮತ್ತು ಏಕಾಂತ ಸೇವೆಯೊಡನೆ ದಿನದ ಕೈಂಕರ್ಯಗಳು ಮುಕ್ತಾಯಗೊಳ್ಳುತ್ತವೆ. ದೂರದೂರದಿಂದ ಬರುವ ಭಕ್ತರಿಗೆ ನಿರಂತರವಾಗಿ ದರ್ಶನವನ್ನು ನೀಡುವ ಉದ್ದೇಶದಿಂದ ಬೆಳಗಿನಿಂದ ಸಂಜೆಯವರೆಗೂ ದೇವಸ್ಥಾನದ ಬಾಗಿಲು ತೆರೆದೇ ಇರುತ್ತದೆ. ಶನಿವಾರವು ಸ್ವಾಮಿಯ ವಿಶೇಷ ಪೂಜಾ ದಿನವಾಗಿದ್ದು ಅಂದು ದೇವರ ದರ್ಶನಕ್ಕೆ ಆಗಮಿಸುವ ಭಕ್ತರ ಸಂಖ್ಯೆಯೂ ಅಧಿಕವಾಗಿರುತ್ತದೆ. ಶ್ರಾವಣ ಮಾಸದ ಶ್ರವಣ ನಕ್ಷತ್ರದಲ್ಲಿ ಸ್ವಾಮಿಯು

ಅವತರಿಸಿರುವುದರಿಂದ ಆ ಶ್ರಾವಣ ಮಾಸದ ಎಲ್ಲ ಶನಿವಾರಗಳಂದು ವಿಶೇಷ ಅಲಂಕಾರ ಮಾಡುತ್ತಾರೆ. ಕೊನೆಯ ಶನಿವಾರದಂದು ಲಕ್ಷಕ್ಕೂ ಮೀರಿ ಭಕ್ತರು ಆಗಮಿಸಿ ದೇವರ ದರ್ಶನ ಪಡೆದು ಪುನೀತರಾಗುತ್ತಾರೆ. ಕೃಷ್ಣ ಜನ್ಮಾಷ್ಟಮಿ ಮತ್ತು ಶರನ್ನವರಾತ್ರಿ ಹಬ್ಬಗಳಲ್ಲಿಯೂ ವಿಶೇಷ ಉತ್ಸವಗಳು ನಡೆಯುತ್ತವೆ. ಕಾರ್ತಿಕ ಮಾಸದಲ್ಲಿ ವಿಷ್ಣು ದೀಪೋತ್ಸವ ಮತ್ತು ಉತ್ಥಾನ ದ್ವಾದಶಿ ವಿಶೇಷ ಹಬ್ಬಗಳು. ವೈಕುಂಠ ಏಕಾದಶಿ ಕೂಡ ದೇವರ ದರ್ಶನಕ್ಕೆ ಪವಿತ್ರ ಸಮಯ. ರಥಸಪ್ತಮಿಯಲ್ಲಿ ಸ್ವಾಮಿಯು ಸೂರ್ಯಪ್ರಭ ಉತ್ಸವದ ಮೂಲಕ ಭಕ್ತರಿಗೆ ದರ್ಶನ ಕೊಡುತ್ತಾನೆ.

ಪ್ರತಿವರ್ಷ ಚೈತ್ರ ಮಾಸದ ಪುಬ್ಬಾ ನಕ್ಷತ್ರದಲ್ಲಿ ಬ್ರಹ್ಮರಥೋತ್ಸವವು ವೈಭವೋಪೇತವಾಗಿ ನಡೆಯುತ್ತದೆ.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಚಿಕ್ಕ ತಿರುಪತಿ ಪುರವರಾಧೀಶ್ವರ ಶ್ರೀ ಶ್ರೀದೇವಿ ಭೂದೇವೀ ಸಮೇತ ಶ್ರೀ ವೆಂಕಟೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಅಹೋ ಮತ್ಸ್ಯರೂಪಂ ತಥಾ ಕೂರ್ಮರೂಪಂ ಮಹಾಕ್ರೋಡರೂಪಂ ತಥಾ ನಾರಸಿಂಹಂ | ಭಜೇ ಕುಬ್ಜರೂಪಂ ವಿಭುಂ ಜಾಮದಗ್ನ್ಯಂ ಧರಂತಂ ಮುರಾರಿಂ ಭಜೇ ವೇಂಕಟೇಶಂ || 6 ||

## 3. ಶ್ರೀಪಾದರಾಜರ ಮಠ ಮುಳಬಾಗಿಲು

ಶ್ರೀಪಾದರಾಜರ ಮಠ ಮತ್ತು ವೃಂದಾವನವು ಮುಳಬಾಗಿಲು ಊರಿನಿಂದ ಒಂದು ಮೈಲಿಯಷ್ಟು ದೂರವಿದ್ದು, ಬೆಂಗಳೂರು-ಚೈನ್ನೈ ರಾಷ್ಟ್ರೀಯ ಹೆದ್ದಾರಿಯ ಬಲಬದಿಯಲ್ಲಿ ಬರುತ್ತದೆ. ಮನೋಹರ ಪ್ರಕೃತಿಯ ಮಡಿಲಲ್ಲಿ ಶ್ರೀಪಾದರಾಜರ ಮಠವಿದೆ ಮತ್ತು ಅವರ ವೃಂದಾವನದ ಪಕ್ಕದಲ್ಲೇ ಅವರ ಆಪ್ತ ಶಿಷ್ಯರಾಗಿದ್ದ ವ್ಯಾಸರಾಯರ ವೃಂದಾವನವೂ ಇದೆ. ಅಲ್ಲಿಯೇ ಶ್ರೀಪಾದರಾಜರು ಸ್ಥಾಪಿಸಿದ ಹನುಮಂತನ ದೇವಸ್ಥಾನ ಮತ್ತು ನರಸಿಂಹ ದೇವಸ್ಥಾನಗಳಿವೆ.

ಶ್ರೀಪಾದರಾಜರ ವೃಂದಾವನವಿರುವುದು ನರಸಿಂಹ ತೀರ್ಥವೆಂಬ ಸ್ಥಳದ ಬಳಿ. ಈ ನರಸಿಂಹ ತೀರ್ಥವು ಧರ್ಮ, ತತ್ತ್ವಜ್ಞಾನ ಮತ್ತು ಭಕ್ತಿಯ ತ್ರಿವೇಣಿ ಸಂಗಮವಾಗಿದೆ. ನರಸಿಂಹ ತೀರ್ಥದ ಬಗ್ಗೆ ಕುತೂಹಲಕಾರಿ ಕಥೆಯೊಂದು ಹೀಗಿದೆ:

ಶ್ರೀಪಾದರಾಜರು ಇಳಿವಯಸ್ಸಿನಲ್ಲಿದ್ದಾಗಲೊಮ್ಮೆ ಅವರಿಗೆ ಗಂಗಾಸ್ನಾನದ ಬಯಕೆಯಾಯಿತು. ಆದರೆ ಅಷ್ಟು ದೂರ ಪ್ರಯಾಣಿಸುವಷ್ಟು ಸುಸ್ಥಿರ ದೇಹಸ್ಥಿತಿಯಲ್ಲಿ ಅವರಿರಲಿಲ್ಲ. ಆಗ ಸ್ವತಃ ಗಂಗೆಯೇ ಅವರಿಗೆ ಕಾಣಿಸಿಕೊಂಡು, ತಾನೇ ನರಸಿಂಹ ತೀರ್ಥಕ್ಕೆ ಬರುವುದಾಗಿ ವಾಗ್ದಾನವಿತ್ತಳು. ಅಂದಿನಿಂದ ಇಂದಿನವರೆಗೆ, ನರಸಿಂಹ ತೀರ್ಥದಲ್ಲಿ ಸ್ನಾನ ಮಾಡುವುದು ಗಂಗಾಸ್ನಾನಕ್ಕೆ ಸಮ ಎಂದು ಪರಿಗಣಿಸುವ ಪರಿಪಾಠ ಬೆಳೆದುಬಂದಿದೆ.

## 4. ಅಮರನಾರಾಯಣ ಸ್ವಾಮಿ ದೇವಸ್ಥಾನ ಕೈವಾರ

ಶ್ರೀಕ್ಷೇತ್ರ ಕೈವಾರವು ಬೆಂಗಳೂರಿನಿಂದ 70 ಕಿ.ಮೀ. ದೂರದಲ್ಲಿ ಬೆಂಗಳೂರು-ಚಿಂತಾಮಣಿ ಮಾರ್ಗದಲ್ಲಿ ಬರುತ್ತದೆ. ಕರ್ನಾಟಕದಲ್ಲಿರುವ ಅಸಂಖ್ಯಾತ, ಆಕರ್ಷಕ ವಿಷ್ಣು ದೇವಾಲಯಗಳ ಪೈಕಿ ಇಲ್ಲಿನ ಶ್ರೀ ಅಮರನಾರಾಯಣ ಸ್ವಾಮಿ ದೇವಸ್ಥಾನವೂ ಒಂದು.

ದೇವತೆಗಳ ದೊರೆ ಇಂದ್ರನು ವೃತ್ರಾಸುರ ಎಂಬ ರಾಕ್ಷಸನನ್ನು ಸಂಹರಿಸಿದ ಅನಂತರ ಪಂಚ ನಾರಾಯಣರ ಪ್ರತಿಷ್ಠಾಪನೆ ಮಾಡುತ್ತಾನೆ - ಕೈವಾರ ಅಮರ ನಾರಾಯಣ, ಬೂದಿಗೆರೆ ದೇಶ ನಾರಾಯಣ, ಯದೋಕೋಡಿ ವೀರ ನಾರಾಯಣ, ಯಲ್ಲೋಡಿ ಆದಿ ನಾರಾಯಣ ಮತ್ತು ಗದಗಿನ ಲಕ್ಷ್ಮೀ ನಾರಾಯಣ. ಈ ಐದೂ ದೇವಾಲಯಗಳಲ್ಲಿ ಒಂದೇ ಮುಹೂರ್ತದಲ್ಲಿ ದೇವರ ಪ್ರತಿಷ್ಠಾಪನೆಯಾಯಿತು. ಶ್ರೀಕ್ಷೇತ್ರ ಕೈವಾರದಲ್ಲಿ ಮಾತ್ರ ಇಂದ್ರನು ತನ್ನ ಕೈಯಾರೆ ವಿಷ್ಣುವಿನ ಪ್ರತಿಷ್ಠಾಪನೆ ಮಾಡಿದನೆಂದು ಪ್ರತೀತಿ. ಆದ್ದರಿಂದ ಇಲ್ಲಿನ ನಾರಾಯಣನಿಗೆ `ಅಮರ' ಎಂಬ ತನ್ನ ಹೆಸರನ್ನು ಸೇರಿಸಿ ಅಮರನಾರಾಯಣ ಎಂದು ಹೆಸರಿಟ್ಟಿದ್ದಾನೆ.

ಚೋಳರ ಕಾಲದಲ್ಲಿ ದೇವಸ್ಥಾನವು ಅಭಿವೃದ್ಧಿ ಕಂಡಿತು. ದೇವಸ್ಥಾನವು ಭವ್ಯ ಪ್ರಾಂಗಣವನ್ನು ಹೊಂದಿದೆ. ಭೂ ನೀಳಾ ಸಮೇತನಾಗಿರುವ ಶ್ರೀ ಅಮರ ನಾರಾಯಣ ಸ್ವಾಮಿಗೆ ಪ್ರತಿನಿತ್ಯವೂ ಇಲ್ಲಿ ಭಕ್ತರು ವೈಭವೋಪೇತವಾದ ಸೇವಾ ಕೈಂಕರ್ಯಗಳನ್ನು ಸಮರ್ಪಿಸಿ ಸ್ವಾಮಿಯ ಕೃಪಾಕಟಾಕ್ಷಕ್ಕೆ ಪಾತ್ರರಾಗುತ್ತಾರೆ. ಪ್ರತಿ ವರ್ಷ ಫಾಲ್ಗುಣ ಮಾಸದ ಪೌರ್ಣಮಿಯಂದು ವಿಜೃಂಭಣೆಯಿಂದ ನಡೆಯುವ ಬ್ರಹ್ಮ ರಥೋತ್ಸವವು ಭಕ್ತರ ಕಂಗಳಿಗೆ ಹಬ್ಬ.

ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಪಿತೃವಾಕ್ಯ ಪರಿಪಾಲನೆಗಾಗಿ ವನವಾಸಕ್ಕೆ ಹೊರಡಲು ಸಿದ್ಧನಾಗುತ್ತಾನೆ. ಆಗ ಅವನ ಅರ್ಧಾಂಗಿ ಸೀತಾದೇವಿ ಮತ್ತು ಸಹೋದರನಾದ ಲಕ್ಷಣ ಇಬ್ಬರೂ ಅವನನ್ನು ಅನುಸರಿಸುತ್ತಾರೆ. ವಾಲ್ಮೀಕಿ ರಾಮಾಯಣದ ಅರಣ್ಯಕಾಂಡದಲ್ಲಿ ಬರುವ `ಅಗ್ರತಃ ಪ್ರಯಯೌ ರಾಮಃ ಸೀತಾ ಮಧ್ಯೇ ಸು ಶೋಭನಾ ಪೃಷ್ಠತಸ್ತು ಧನುಷ್ಪಾಣಿಃ ಲಕ್ಷಣಃ ಅನುಜಗಾಮಹ' ಎಂಬ ಶ್ಲೋಕದಲ್ಲಿ ವನವಾಸದ ಪ್ರಸಂಗವನ್ನು ಸುಂದರವಾಗಿ ಬಣ್ಣಿಸಲಾಗಿದೆ. ಇದಕ್ಕೆ ಪೂರಕವಾಗಿ ಅಮರ ನಾರಾಯಣ ದೇವಸ್ಥಾನದ ಪ್ರಾಂಗಣದಲ್ಲಿರುವ ಒಂದು ಪುಟ್ಟ ದೇವಸ್ಥಾನದಲ್ಲಿ ಶ್ರೀರಾಮ, ಸೀತೆ ಮತ್ತು

ಲಕ್ಷ್ಮಣರ ಸುಂದರ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ತಮ್ಮ ವನವಾಸದ ಸಮಯದಲ್ಲಿ ಬೆಟ್ಟಗುಡ್ಡಗಳನ್ನು ದಾಟಿ ಹೋಗುವಾಗ ರಾಮ-ಸೀತೆ-ಲಕ್ಷ್ಮಣರು ಇಲ್ಲಿಗೆ ಭೇಟಿ ನೀಡಿದ್ದರೆಂದೂ ಸೀತಾಮಾತೆಗೆ ಬಾಯಾರಿಕೆಯಾದಾಗ ಲಕ್ಷ್ಮಣನು ಬಾಣಪ್ರಯೋಗ ಮಾಡಿ ಭೂಮಿಯಿಂದ ನೀರು ತರಿಸಿದ್ದನೆಂದೂ ಪ್ರತೀತಿ. ಅಂದು ಲಕ್ಷ್ಮಣನು ನೀರು ಬರುವಂತೆ ಮಾಡಿದ ಸ್ಥಳವೇ ಇಂದು `ಲಕ್ಷ್ಮಣತೀರ್ಥ' ಎಂದು ಪ್ರಸಿದ್ಧವಾಗಿದೆ. ಇಲ್ಲಿ ದೊರೆಯುವ ನೀರು ಇಂದಿಗೂ ಸಿಹಿಯಾಗಿರುವುದು ನಿಜಕ್ಕೂ ವಿಶೇಷ.

ಶ್ರೀಕ್ಷೇತ್ರ ಕೈವಾರಕ್ಕೆ ಇರುವ ಇನ್ನೊಂದು ಇತಿಹಾಸವೆಂದರೆ, ದ್ವಾಪರ ಯುಗದಲ್ಲಿ ಈ ಪುಣ್ಯಕ್ಷೇತ್ರವು `ಏಕಚಕ್ರನಗರ' ಎಂದು ಪ್ರಸಿದ್ಧವಾಗಿತ್ತು. ಇಲ್ಲಿನ ಬೆಟ್ಟವೊಂದರ ಮೇಲೆ ಬಕಾಸುರ ಎಂಬ ರಾಕ್ಷಸನು ವಾಸವಾಗಿದ್ದನು. ಅವನು ಊರಿನವರೊಂದಿಗೆ ಮಾಡಿಕೊಂಡ ಒಪ್ಪಂದದ ಪ್ರಕಾರ ಊರಿನವರು ಪ್ರತಿದಿನವೂ ಅವನಿಗೆ ತಿನ್ನಲು ಒಂದು ಬಂಡಿಯ ತುಂಬ ಆಹಾರವನ್ನೂ ಅದರೊಂದಿಗೆ ಒಬ್ಬ ಮನುಷ್ಯನನ್ನೂ ಕಳುಹಿಸಿಕೊಡಬೇಕಾಗಿತ್ತು. ಅಂತಹ ಸಂದರ್ಭದಲ್ಲಿ ಭೀಮಸೇನನು ತನ್ನ ಅಪಾರ ಬಲದಿಂದ ಆ ರಾಕ್ಷಸನೊಂದಿಗೆ ಸೆಣಸಾಡಿ ಅವನನ್ನು ಸಂಹರಿಸಿದನು. ಬಕಾಸುರನು ಶಿವಭಕ್ತನಾಗಿದ್ದರಿಂದ ಅವನ ವಧೆಯ ದೋಷ ಪರಿಹಾರಾರ್ಥವಾಗಿಯೇ ಪಾಂಡವರು ಬೆಟ್ಟದ ಹತ್ತಿರವೇ ಪಂಚ ಶಿವಲಿಂಗಗಳ ಪ್ರತಿಷ್ಠಾಪನೆ ಮಾಡಿದರು. ಈ ಸುಂದರ ದೇವಸ್ಥಾನದಲ್ಲಿ ವಿಶೇಷವಾಗಿ ಭೀಮೇಶ್ವರನ ಪೂಜೆಯು ವಿಜೃಂಭಣೆಯಿಂದ ನಡೆಯುತ್ತದೆ.

## 5. ಕೋಲಾರ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ವಿಜಯೇಂದ್ರ ದೇವಸ್ಥಾನ, ಬೆಥಮಂಗಲ, ಬಂಗಾರಪೇಟೆ ತಾಲ್ಲೂಕು
2. ಶ್ರೀ ಕೋಟಿಲಿಂಗೇಶ್ವರ ದೇವಸ್ಥಾನ, ಕೋಟಿಲಿಂಗೇಶ್ವರ, ಬಂಗಾರಪೇಟೆ ತಾಲ್ಲೂಕು
3. ಶ್ರೀ ಅಮರನಾರಾಯಣ ದೇವಸ್ಥಾನ, ಕೈವಾರ, ಕೋಲಾರ ತಾಲ್ಲೂಕು
4. ಶ್ರೀ ಕಾಶಿ ವಿಶ್ವೇಶ್ವರ ದೇವಸ್ಥಾನ, ಅಂತರಗಂಗೆ, ಕೋಲಾರ ತಾಲ್ಲೂಕು
5. ಶ್ರೀ ಕೋಲರಮ್ಮ, ಶ್ರೀ ಸೋಮೇಶ್ವರ ದೇವಾಲಯಗಳು, ಕೋಲಾರ (ಎಎಸ್ಐ), ಕೋಲಾರ ತಾಲ್ಲೂಕು
6. ಶ್ರೀ ಮಾರ್ಕಂಡೇಶ್ವರ ಸ್ವಾಮಿ ದೇವಸ್ಥಾನ, ವೊಕ್ಕಲೆರಿ, ಕೋಲಾರ ತಾಲ್ಲೂಕು
7. ಶ್ರೀ ರಾಮಲಿಂಗೇಶ್ವರ ದೇವಸ್ಥಾನ, ಅವನಿ (ಎಎಸ್ಐ), ಮುಳಬಾಗಿಲು ತಾಲ್ಲೂಕು
8. ಅವನಿ ಶೃಂಗೇರಿ ಜಗದ್ಗುರು ಶಂಕರಾಚಾರ್ಯ ಶರದಾ ಪೀಠ, ಅವನಿ, ಮುಳಬಾಗಿಲು ತಾಲ್ಲೂಕು
9. ಶ್ರೀ ಸೋಮೇಶ್ವರ ದೇವಸ್ಥಾನ, ಶ್ರೀ ಮಹಾ ಗಣಪತಿ ದೇವಸ್ಥಾನ, ಕುರುಡುಮಲೆ, ಮುಳಬಾಗಿಲು ತಾಲ್ಲೂಕು
10. ಶ್ರೀ ಆಂಜನೇಯ, ಶ್ರೀ ಸೋಮೇಶ್ವರ, ಶ್ರೀ ವಿಟ್ಟಲೇಶ್ವರ, ಶ್ರೀಪದರಾಜ ಮಠ, ನರಸಿಂಹ ತೀರ್ಥ ದೇವಾಲಯಗಳು, ಮುಳಬಾಗಿಲು, ಮುಳಬಾಗಿಲು ತಾಲ್ಲೂಕು
11. ಶ್ರೀ ವಿರೂಪಾಕ್ಷೇಶ್ವರ ದೇವಸ್ಥಾನ, ವಿರೂಪಾಕ್ಷಿ, ಮುಳಬಾಗಿಲು ತಾಲ್ಲೂಕು

# 12. ಚಿಕ್ಕಬಳ್ಳಾಪುರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಚಿಕ್ಕಬಳ್ಳಾಪುರ ಒಂದು ದಕ್ಷಿಣಬಳನಾಡಿನ ಜಿಲ್ಲೆಯಾಗಿದೆ. ಚಿಕ್ಕಬಳ್ಳಾಪುರ ನಗರವು ಜಿಲ್ಲಾ ಕೇಂದ್ರವಾಗಿದೆ. ಚಿಕ್ಕಬಳ್ಳಾಪುರ ಜಿಲ್ಲೆಯು ಕೋಲಾರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಗಳಿಂದ, ಸುತ್ತುವರಿದಿದೆ. ಈ ಜಿಲ್ಲೆಯು ಬಾಗೇಪಲ್ಲಿ, ಚಿಕ್ಕಬಳ್ಳಾಪುರ, ಚಿಂತಾಮಣಿ, ಗೌರಿಬಿದನೂರು, ಗುಡಿಬಂಡಾ, ಶಿಡ್ಲಘಟ್ಟ ಎಂಬ 6 ತಾಲ್ಲೂಕುಗಳನ್ನು ಹೊಂದಿದೆ.


CHIKKABALLAPURA DISTRICT
KARNATAKA
N
W
E
S
BAGEPALLI
GUDIBANDA
GAURIBIDANUR
CHIK BALLAPUR
SIDLAGHATTA
CHINTAMANI
0
10
20
kilometers
KARNATAKA STATE
District Headquarter
Taluk Headquarter
District Boundary
Taluk Boundary
NH / SH
Metalled Road
Railway Line

## 1. ರಂಗನಾಥ ದೇವಸ್ಥಾನ, ರಂಗಸ್ಥಳ

ರಂಗಸ್ಥಳವು ಚಿಕ್ಕಬಳ್ಳಾಪುರದಿಂದ ಸುಮಾರು 6 ಕಿ.ಮೀ. ದೂರದಲ್ಲಿ ಗೌರಿಬಿದನೂರಿಗೆ ಹೋಗುವ ರಸ್ತೆಯಲ್ಲಿ ಸಿಗುತ್ತದೆ. ಇಲ್ಲಿನ ಮುಖ್ಯ ಆಕರ್ಷಣೆಯೆಂದರೆ ಶ್ರೀ ರಂಗನಾಥನ ಸುಂದರ ದೇವಸ್ಥಾನ. ಇಲ್ಲಿ ಸಾಲಿಗ್ರಾಮ ಶಿಲೆಯಲ್ಲಿ ಕೆತ್ತಲಾದ ಭೂದೇವಿ ನೀಳಾದೇವಿ ಸಮೇತ ಶ್ರೀ ರಂಗನಾಥಸ್ವಾಮಿಯ ವಿಗ್ರಹವಿದೆ. ಈ ಮೂರ್ತಿಯು ಸಪ್ತ ಋಷಿಗಳಿಂದ ಸ್ಥಾಪಿತವಾಗಿದೆ ಎಂದು ಪ್ರತೀತಿ.

ತ್ರೇತಾಯುಗದಲ್ಲಿ ರಾಮನ ಪಟ್ಟಾಭಿಷೇಕವಾಗುವ ವೇಳೆಯಲ್ಲಿ ವಿಭೀಷಣನು ಅಯೋಧ್ಯೆಗೆ ಬಂದಿರುತ್ತಾನೆ. ವಿಭೀಷಣನಿಗೆ ಶ್ರೀರಾಮನು ತನ್ನ ಕುಲದೈವವಾದ ರಂಗನಾಥ ಸ್ವಾಮಿಯನ್ನು ಬಿದಿರಿನ ಬುಟ್ಟಿಯಲ್ಲಿ ನೀಡುತ್ತಾನೆ. ವಿಭೀಷಣನು ತಮಿಳುನಾಡಿನ ಶ್ರೀರಂಗ ಎಂಬ ಕ್ಷೇತ್ರದಲ್ಲಿ ಈ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾನೆ. ಆಗ ರಂಗಸ್ಥಳದಲ್ಲಿ ಅದರ ಜ್ಞಾಪಕಾರ್ಥವಾಗಿ ಸಪ್ತ ಋಷಿಗಳಿಂದ ರಂಗನಾಥನ ಪ್ರತಿಷ್ಠಾಪನೆ ನಡೆಯುತ್ತದೆ.

ಇಲ್ಲಿ ಗರ್ಭಗೃಹವು ಬಿದಿರು ಬುಟ್ಟಿಯ ಆಕಾರದಲ್ಲಿರುತ್ತದೆ. ಸ್ವಾಮಿಯನ್ನು ಗರುಡ ಎತ್ತಿಕೊಂಡಿರುತ್ತಾನೆ ಮತ್ತು ಆದಿಶೇಷನ ಮೇಲೆ ಸ್ವಾಮಿ ಪವಡಿಸಿರುತ್ತಾನೆ. ದೇವರ ಸುತ್ತಲೂ ಬ್ರಹ್ಮ, ಮಹೇಶ್ವರ,ಅಷ್ಟದಿಕ್ಪಾಲಕರು, ಕಲ್ಪವೃಕ್ಷ, ಕಾಮಧೇನು, ಶಂಖ, ಚಕ್ರ, ಧನುಸ್ಸು, ಗದೆ ಮತ್ತು ಸಪ್ತ ಋಷಿಗಳನ್ನು ಕೆತ್ತಲಾಗಿದೆ. ಅಂದರೆ ಸ್ವಾಮಿಯು ವೈಕುಂಠದಲ್ಲಿ ಮಲಗಿರುವ ಹಾಗೆ, ಸುತ್ತಲೂ ಎಲ್ಲರೂ ಕೂತು ಭಜಿಸುವ ಭಾವನೆ ಮೂಡುತ್ತದೆ. ದೇವರ ಪಾದದ ಬಳಿ ಒಂದು ಕಿಂಡಿ ಇರುತ್ತದೆ. ಮಕರ ಸಂಕ್ರಾಂತಿಯ ದಿನ ಸೂರ್ಯೋದಯ-ವಾಗುವ ವೇಳೆಯಲ್ಲಿ ಸೂರ್ಯನ ಕಿರಣಗಳು ಆ ಕಿಂಡಿಯ ಮುಖಾಂತರ ಸ್ವಾಮಿಯ ಪಾದ ಕಮಲಗಳಿಗೆ ಬೀಳುತ್ತವೆ. ಈ ದೇವಸ್ಥಾನವನ್ನು ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾಯಿತು.

ದೇವಸ್ಥಾನದ ಮುಂದಿರುವ ಎರಡು ಕಂಬಗಳಲ್ಲಿ ಒಂದರ ಮೇಲೆ ಅರಿಷಡ್ ವರ್ಗ ಜಯಿಸಿದರೆ ಮೋಕ್ಷ ಸಿಗುವುದು ಎಂದು ತೋರಿಸಲಾಗಿದೆ. ಇನ್ನೊಂದು ಕಂಬದ ಮೇಲೆ ಅರಿಷಡ್ ವರ್ಗ ಜಯಿಸದ ವ್ಯಕ್ತಿಯನ್ನು ಹುಲಿಯ ರೂಪದಲ್ಲಿ ಮಹಾಮಾಯೆ ಕಿತ್ತು ತಿನ್ನುತ್ತಿರುವುದನ್ನು ತೋರಿಸಲಾಗಿದೆ. ದೇವಸ್ಥಾನದ ಸುತ್ತಲೂ ಇರುವ ಬೆಟ್ಟಗಳನ್ನು 'ಸ್ಕಂದಗಿರಿ ತಪ್ಪಲು' ಎಂದು ಕರೆಯುತ್ತಾರೆ. ಏಕೆಂದರೆ ಇದೇ ಸ್ಥಳದಲ್ಲಿ ಸ್ಕಂದ ಪುರಾಣದ ಶ್ಲೋಕಗಳನ್ನು ಶುಕಮುನಿಗಳು ಇತರ ಋಷಿಗಳಿಗೆ ಉಪದೇಶ ಮಾಡಿದ್ದರು ಎಂದು ಪ್ರತೀತಿ. ಆಶ್ವಯುಜ ಶುದ್ಧ ಏಕಾದಶಿಯಿಂದ ಪೂರ್ಣಿಮೆಯವರೆಗೆ ಪವಿತ್ರೋತ್ಸವ

ನಡೆಯುತ್ತದೆ. ಮಾರ್ಗಶಿರ ಏಕಾದಶಿಯಿಂದ ಸಪ್ತದಿನ ಸಂಕಲ್ಪಿತವಾಗಿ ಬ್ರಹ್ಮರಥೋತ್ಸವ ನಡೆಯುತ್ತದೆ. ಮುಕ್ಕೋಟಿ ಏಕಾದಶೀ (ಮೋಕ್ಷದಾ ಏಕಾದಶೀ) ಮತ್ತು ದ್ವಾದಶಿಯಂದು ವಿಶೇಷ ಪೂಜೆ ನಡೆಸಲಾಗುತ್ತದೆ. ಅಂದು ಉತ್ತರ ದ್ವಾರದಲ್ಲಿ ಸ್ವಾಮಿಯ ದರ್ಶನ ಪಡೆಯಬಹುದಾಗಿದೆ.

ದೇವಸ್ಥಾನದ ಹೊರಗಿನ ಪ್ರಾಕಾರ ಮತ್ತು ಗೋಪುರಗಳನ್ನು ವಿಜಯನಗರದ ಅರಸರುಗಳು ಕಟ್ಟಿಸಿರುತ್ತಾರೆ. ಗರ್ಭಗೃಹದ ಸುತ್ತಲೂ ಪ್ರಾಕಾರವಿದೆ. ರಂಗನಾಥನು ಯೋಗನಿದ್ರೆಯಲ್ಲಿದ್ದು ಶೇಷನು ಕೊಡೆಯ ಹಾಗೆ ತನ್ನ ಐದೂ ಹೆಡೆಗಳನ್ನು ಹರಡಿದ್ದಾನೆ. ದೇವಸ್ಥಾನದಲ್ಲಿ ಶ್ರೀ ಚಕ್ರತ್ ಆಳ್ವಾರ್, ಶ್ರೀ ರಾಮಾನುಜ ಮತ್ತು ನಮ್ಮಾಳ್ವಾರ್ ವಿಗ್ರಹಗಳನ್ನೂ ಕಾಣಬಹುದು. ದೇವಸ್ಥಾನದ ಹತ್ತಿರ ಶಂಖತೀರ್ಥ ಮತ್ತು ಚಕ್ರತೀರ್ಥ ಎಂಬ ಎರಡು ಕಲ್ಯಾಣಿಗಳಿವೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ರಂಗಸ್ಥಳ ಪುರವರಾಧೀಶ್ವರ ಶ್ರೀ ಭೂದೇವೀ ಶ್ರೀನೀಳಾದೇವೀ ಸಮೇತ ಶ್ರೀ ರಂಗನಾಥ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಅಮೋಘಮುದ್ರೇ ಪರಿಪೂರ್ಣನಿದ್ರೇ ಶ್ರೀಯೋಗನಿದ್ರೇ ಸಸಮುದ್ರ ನಿದ್ರೇ | ಶ್ರಿತ್ಯೈಕಭದ್ರೇ ಜಗದೇಕನಿದ್ರೇ ಶ್ರೀರಂಗಭದ್ರೇ ರಮತಾಂ ಮನೋ ಮೇ ||

## 2. ಶ್ರೀ ಲಕ್ಷ್ಮೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನ ಗಡಿದಂ

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಬಾಗೇಪಲ್ಲಿಯಿಂದ ಪೂರ್ವಕ್ಕೆ ಕೇವಲ 3 ಕಿಮೀ ಅಂತರದಲ್ಲಿರುವ ಪುಟ್ಟ ಗ್ರಾಮವೇ ಶ್ರೀ ಗಡಿದಂ ಕ್ಷೇತ್ರ. ಇಲ್ಲಿ ಶ್ರೀ ಭೂನೀಳಾ ಸಮೇತನಾಗಿರುವ ಲಕ್ಷ್ಮೀ ವೆಂಕಟೇಶ್ವರ ಸ್ವಾಮಿ ಆಲಯವು ಪ್ರಾಕೃತಿಕ ಸೌಂದರ್ಯವನ್ನು ಹೊಂದಿದ್ದು ನೇತ್ರಾನಂದವನ್ನು ನೀಡುತ್ತದೆ.

ವಿಶಾಲವಾದ ಪ್ರಾಂಗಣವನ್ನು ಹೊಂದಿರುವ ಈ ಭವ್ಯ ದೇವಾಲಯವು ವಿಶೇಷವಾದ ವೈಶಿಷ್ಟ್ಯವನ್ನು ಸಹಾ ಹೊಂದಿದೆ ಎಂಬುದು ಇಲ್ಲಿನ ಸ್ಥಳ ಪುರಾಣದಿಂದ ಸ್ಪಷ್ಟವಾಗುತ್ತದೆ. ದ್ವಾಪರ ಯುಗದಲ್ಲಿ ಭಗವದ್ ಭಕ್ತರಾದ ಪಾಂಡವರನ್ನು ಹಾಗೂ ಅವರ ಏಕೈಕ ಕುಡಿಯಾದ ಪರೀಕ್ಷಿತ್ ಮಹಾರಾಜನನ್ನು ಕಾಪಾಡಿದ ಶ್ರೀಕೃಷ್ಣನು ತನ್ನ ಧಾಮಕ್ಕೆ ಹಿಂದಿರುಗುತ್ತಾನೆ. ಕಾಲಾಂತರದಲ್ಲಿ ರಾಜನಾದ ಪರೀಕ್ಷಿತನು ಬೇಟೆಗೆಂದು ಅರಣ್ಯ ಹೊಕ್ಕು ದಾಹವನ್ನು

ತೀರಿಸಿಕೊಳ್ಳಲು ಸಮೀಪದ ಆಶ್ರಮವನ್ನು ಪ್ರವೇಶಿಸುತ್ತಾನೆ. ಅಲ್ಲಿ ತಪೋಮಗ್ನರಾಗಿದ್ದ ಶಮೀಕ ಮಹರ್ಷಿಯು ರಾಜನ ಆಗಮನವನ್ನು ಅರಿಯದೆ ಹೋಗಲು ಅಸಂತೃಪ್ತನಾದ ರಾಜಾ ಪರೀಕ್ಷಿತನು ಅಲ್ಲಿಯೇ ಗತಪ್ರಾಣವಾಗಿ ಬಿದ್ದಿದ್ದ ಸರ್ಪವೊಂದನ್ನು ಆ ಋಷಿಯ ಕೊರಳಿಗೆ ಹಾಕಿ ಅಲ್ಲಿಂದ ನಿರ್ಗಮಿಸುತ್ತಾನೆ. ಇದನ್ನರಿತ ಋಷಿ ಕುಮಾರ ಶೃಂಗಿಯು ಪರೀಕ್ಷಿತ್ ಮಹಾರಾಜನು ಆ ದಿನದಿಂದ ಏಳನೇ ದಿನದಂದು ಸರ್ಪದಿಂದ ಕಚ್ಚಲ್ಪಟ್ಟು ಸಾಯಬೇಕು ಎಂದು ಶಾಪ ನೀಡುತ್ತಾನೆ. ಜನಮೇಜಯ ಮಹಾರಾಜನು ಪರೀಕ್ಷಿತನ ಮಗ. ಈ ಘಟನೆಯಿಂದ ಕ್ರುದ್ಧನಾದ ಜನಮೇಜಯನು ಇಡೀ ಸರ್ಪಕುಲದ ನಾಶಕ್ಕಾಗಿ ಪಣತೊಟ್ಟು ಮುಂದೆ ಸರ್ಪ ಸತ್ರಯಜ್ಞವನ್ನು ಮಾಡುತ್ತಾನೆ. ಆ ಯಜ್ಞದಲ್ಲಿ ಅಗಣಿತ ಸಂಖ್ಯೆಯ ಸರ್ಪಗಳು ಗುಂಪುಗುಂಪಾಗಿ ಅಗ್ನಿಗೆ ಆಹುತಿಯಾಗುತ್ತವೆ. ನಂತರದಲ್ಲಿ ಈ ಸರ್ಪಹತ್ಯಾ ದೋಷದ ನಿವಾರಣೆಗಾಗಿ ಜನಮೇಜಯ ಮಹಾರಾಜನಿಂದ ನಿರ್ಮಿಸಲ್ಪಟ್ಟ 101 ವಿಷ್ಣು ದೇಗುಲಗಳ ಪೈಕಿ ಶ್ರೀ ಗಡಿದಂ ಕ್ಷೇತ್ರದಲ್ಲಿರುವ ವೆಂಕಟೇಶ್ವರ ಸ್ವಾಮಿ ದೇವಾಲಯವು ಒಂದು ಎಂಬುದು ಈ ಸ್ಥಳದ ಮಹಾತ್ಮೆಯಾಗಿದೆ.

ಪಂಚರಾತ್ರಾಗಮಗಳ ಪ್ರಕಾರ ನಿತ್ಯ ಪೂಜೆಗಳನ್ನು ಶ್ರೀ ಲಕ್ಷ್ಮೀ ವೆಂಕಟೇಶ್ವರನ ರೂಪದಲ್ಲಿ ಭಗವಂತನು ಇಲ್ಲಿ ಸ್ವೀಕರಿಸುತ್ತಾ ಅನುದಿನವೂ ಅನೇಕ ಭಕ್ತರ ಅಭೀಷ್ಟೆಗಳನ್ನು ನೆರವೇರಿಸುತ್ತಾನೆ. ವೈಶಾಖ, ಆಷಾಢ, ಕಾರ್ತಿಕ ಹಾಗೂ ಶ್ರಾವಣ ಮಾಸಗಳಲ್ಲಿ ವಿಶೇಷ ರೀತಿಯ ಪೂಜಾ ಕೈಂಕರ್ಯಗಳನ್ನು ಇಲ್ಲಿ ನೆರವೇರಿಸಲಾಗುತ್ತದೆ. ಇಲ್ಲಿನ ಭೂದೇವಿ ಹಾಗೂ ನೀಳಾದೇವಿಯರ ವಿಗ್ರಹಗಳನ್ನು ಚೋಳ ಹಾಗೂ ಹೊಯ್ಸಳ ರಾಜರು ಪ್ರತಿಷ್ಠಾಪಿಸಿದರೆಂದು ಹೇಳಲಾಗಿದ್ದು ದೇವಾಲಯದ ಗೋಡೆಗಳ ಮೇಲೆ ಇದಕ್ಕೆ ಸಂಬಂಸಿದ ಶಿಲಾಶಾಸನಗಳು ಇಂದಿಗೂ ಸಹಾ ಕಂಡುಬರುತ್ತವೆ.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಗಡಿದಂ ಪುರವರಾಧೀಶ್ವರ ಶ್ರೀ ಲಕ್ಷ್ಮೀ ದೇವಿ ಸಮೇತ ಶ್ರೀ ವೆಂಕಟೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಮಹಾಯೋಗಸಾದ್ಧ್ಯಂ ಪರಿಭ್ರಾಜಮಾನಂ ಚಿರಂ ವಿಶ್ವರೂಪಂ
ಸುರೇಶಂ ಮಹೇಶಂ | ಅಹೋ ಶಾಂತರೂಪಂ ಸದಾಧ್ಯಾನಗಮ್ಯಂ ಧರಂತಂ ಮುರಾರಿಂ
ಭಜೇ ವೇಂಕಟೇಶಂ ||

## 3. ಚಿಕ್ಕಬಳ್ಳಾಪುರ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಭೋಗ ನಂದೇಶ್ವರ ದೇವಸ್ಥಾನ, ನಂದಿ ಗ್ರಾಮ (ಎಎಸ್ಐ), ಚಿಕ್ಕಬಳ್ಳಾಪುರ ತಾಲ್ಲೂಕು
2. ಶ್ರೀ ಯೋಗ ನಂದೇಶ್ವರ ದೇವಸ್ಥಾನ, ನಂದಿ ಬೆಟ್ಟದ ತುದಿ (ಎಂಡಿಕೆ), ಚಿಕ್ಕಬಳ್ಳಾಪುರ ತಾಲ್ಲೂಕು
3. ಶ್ರೀ ರಂಗನಾಥ ದೇವಸ್ಥಾನ, ರಂಗಸ್ಥಲ (ಎಂಡಿಕೆ), ಚಿಕ್ಕಬಳ್ಳಾಪುರ ತಾಲ್ಲೂಕು
4. ಪಾಪಾಗ್ನಿ ಮಠ, ಚಿಕ್ಕಬಳ್ಳಾಪುರ, ಚಿಕ್ಕಬಳ್ಳಾಪುರ ತಾಲ್ಲೂಕು
5. ಶ್ರೀ ಶಿವ, ಶ್ರೀ ಪಾರ್ವತಿ ಮತ್ತು ಶ್ರೀ ಗಣೇಶ ದೇವಾಲಯಗಳು, ಕೈಲಾಸಗಿರಿ, ಚಿಂತಾಮಣಿ ತಾಲ್ಲೂಕು
6. ಶ್ರೀ ಅಮರನಾರಾಯಣ, ಶ್ರೀ ಭೀಮೇಶ್ವರ ಮತ್ತು ಶ್ರೀ ಯೋಗೀ ನಾರಾಯಣ ಆಶ್ರಮ, ದೇವಾಲಯಗಳು, ಕೈವಾರ, ಚಿಂತಾಮಣಿ ತಾಲ್ಲೂಕು
7. ಶ್ರೀ ಮಹೇಶ್ವರಮ್ಮ ದೇವಸ್ಥಾನ, ಮಿಣಕನಗುರ್ಕಿ, ಚಿಂತಾಮಣಿ ತಾಲ್ಲೂಕು
8. ಶ್ರೀ ವಿದುರಾಶ್ವತ್ಥ ನಾರಾಯಣ ದೇವಸ್ಥಾನ, ವಿದುರಾಶ್ವತ್ಥ, ಗೌರಿಬಿದನೂರು ತಾಲ್ಲೂಕು

# 13. ತುಮಕೂರು ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ತುಮಕೂರು ಒಂದು ದಕ್ಷಿಣಬಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ರಾಮನಗರ, ಮಂಡ್ಯ, ಹಾಸನ, ಚಿತ್ರದುರ್ಗ ಜಿಲ್ಲೆಗಳು ಮತ್ತು ಆಂಧ್ರಪ್ರದೇಶಗಳು ಸುತ್ತುವರಿದಿವೆ. ತುಮಕೂರು ನಗರವೇ ಜಿಲ್ಲಾ ಕೇಂದ್ರ. ಚಿಕ್ಕನಾಯಕನಹಳ್ಳಿ, ಗುಬ್ಬಿ, ಕೊರಟಗೆರೆ, ಕುಣಿಗಲ್, ಮದುಗಿರಿ, ಪಾವಗಡ, ಸಿರಾ, ತಿಪಟೂರು, ತುಮಕೂರು, ತುರುವೇಕೆರೆ ಎಂಬ 10 ತಾಲ್ಲೂಕುಗಳನ್ನು ಹೊಂದಿದೆ.

ಶಿಂಷಾ, ಜಯಮಂಗಲಿ, ನಾಗಿನಿ, ಸುವರ್ಣಮುಖಿ, ಗರುಡಾಚಲ


TUMAKURU DISTRICT
KARNATAKA
N
ANDHRA PRADESH STATE
ANDHRA PRADESH STATE
ANDHRA PRADESH STATE
CHITRADURGA DISTRICT
SIRA
MADHUGIRI
KOLAR DISTRICT
KORATAGERE
CHICKNAYAKAN HALLI
HASSAN DISTRICT
GUBBI
THURUVEKERE
BANGALORE RURAL DISTRICT
MANDYA DISTRICT
KEY MAP
LEGEND
Taluk boundary
District headquarters
Taluk headquarters
Metalled road
National Highway
Railway track

## 1. ಭೋಗ ಮತ್ತು ಯೋಗ ಲಕ್ಷ್ಮೀನರಸಿಂಹ ದೇವಸ್ಥಾನಗಳು, ದೇವರಾಯನ ದುರ್ಗ

ಶ್ರೀ ಕರಿಗಿರಿ ಕ್ಷೇತ್ರವೆಂದು ಪ್ರಸಿದ್ಧವಾದ ದೇವರಾಯನ ದುರ್ಗವು ತುಮಕೂರು ಪಟ್ಟಣದಿಂದ 15 ಕಿಮಿ ದೂರದಲ್ಲಿ ಇದೆ. ಈ ಕ್ಷೇತ್ರದ ಸುತ್ತಲೂ ಬೆಟ್ಟ ಗುಡ್ಡಗಳು ತುಂಬಿವೆ. ಊರಿನ ಮಧ್ಯಭಾಗದಲ್ಲಿ ಶ್ರೀ ಭೋಗಾ ಲಕ್ಷ್ಮೀನರಸಿಂಹ ಸ್ವಾಮಿಯವರ ದೇವಸ್ಥಾನವು ಪೂರ್ವಾಭಿಮುಖವಾಗಿ ದೂರ್ವಾಸ ಮಹರ್ಷಿಗಳಿಂದ ಸ್ಥಾಪಿತವಾಗಿದೆ. ಈ ದೇವಸ್ಥಾನವು ಗರ್ಭಾಂಕಣ, ನವರಂಗ, ಮುಖ ಮಂಟಪ, ಪ್ರಾಕಾರ ಮತ್ತು ರಾಜ ಗೋಪುರ ಎಂಬ ಐದು ಅಂಗಗಳಿಂದಲೂ ಪರಿಪೂರ್ಣವಾಗಿ ನಿರ್ಮಿತವಾಗಿದೆ. ಶ್ರೀ ಲಕ್ಷ್ಮೀದೇವಿ ಅಮ್ಮನವರು ಪ್ರತ್ಯೇಕ ಗರ್ಭಾಂಕಣದಲ್ಲಿ “ಪ್ರಸನ್ನ ಲಕ್ಷ್ಮೀ”ಯಾಗಿ ಕುಳಿತಿದ್ದಾರೆ. ದೇವಸ್ಥಾನದ ಹಿಂಭಾಗದಲ್ಲಿ ದೊಡ್ಡ ಪುಷ್ಕರಣಿ ಮತ್ತು ಮುಂಭಾಗದಲ್ಲಿ ವಿಶಾಲವಾದ ರಥಬೀದಿ ಇವೆ.

ಶ್ರೀ ಯೋಗಾ ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನ - ದೇವರಾಯನ ದುರ್ಗದಲ್ಲಿ ಸಮುದ್ರ ಮಟ್ಟದಿಂದ 4200 ಅಡಿ ಎತ್ತರದ ಬೆಟ್ಟದಲ್ಲಿ , ಬ್ರಹ್ಮ ದೇವರಿಂದ ಸ್ಥಾಪಿತವಾಗಿರುವ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯ ದೇವಸ್ಥಾನವಿದೆ. ಈ ದೇವರನ್ನು ಶ್ರೀ ಯೋಗಾಲಕ್ಷ್ಮೀನರಸಿಂಹ ಸ್ವಾಮಿ ಎಂದು ಕರೆಯುತ್ತಾರೆ. ಈ ದೇವಸ್ಥಾನವು ಗರ್ಭಾಂಕಣ, ನವರಂಗ, ಮುಖ ಮಂಟಪ, ಪ್ರಾಕಾರ ಮತ್ತು ರಾಜಗೋಪುರ ಎಂಬ ಐದು ಅಂಗಗಳಿಂದಲೂ ಪರಿಪೂರ್ಣವಾಗಿದೆ. ಶ್ರೀ ಸ್ವಾಮಿಯವರ ಸನ್ನಿಧಾನವು ಉತ್ತರಾಭಿಮುಖವಾಗಿದೆ. ಅಮ್ಮನವರ ಸನ್ನಿಧಾನವು ಪೂರ್ವಾಭಿಮುಖವಾಗಿದೆ. ಕೆಳಗಿನ ಬೆಟ್ಟದ ದೇವಸ್ಥಾನಕ್ಕೂ ಮೇಲಿನ ಬೆಟ್ಟದ ದೇವಸ್ಥಾನಕ್ಕೂ 1.5 ಕಿಮೀ ಅಂತರವಿದೆ. ಕೆಳಗಿನ ಬೆಟ್ಟಕ್ಕಿಂತಲೂ ಮೇಲಿನ ಬೆಟ್ಟವು 500 ಅಡಿ ಎತ್ತರವಾಗಿದೆ.

ದರ್ಶನ ಸಮಯ - ಭೋಗಾನರಸಿಂಹ ದೇವಾಲಯ ಬೆಳಿಗ್ಗೆ 6:00 ರಿಂದ ರಾತ್ರಿ 8:00 ಮತ್ತು ಯೋಗಾನರಸಿಂಹ ದೇವಾಲಯವು ಬೆಳಿಗ್ಗೆ 10:00 ರಿಂದ ಸಂಜೆ 5:00

ಸುಸಜ್ಜಿತ ರಸ್ತೆ ಇದೆ, ಲೋಕೋಪಯೋಗಿ ಇಲಾಖೆಯ ಅತಿಥಿ ಗೃಹ, ವಾಹನ ನಿಲುಗಡೆ ಮತ್ತು ಸಣ್ಣ ಅಂಗಡಿಗಳು ಇವೆ.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಕರಿಗಿರಿ ಪುರವರಾಧೀಶ್ವರ ಶ್ರೀ ಲಕ್ಷ್ಮೀ ದೇವೀ ಸಮೇತ ಶ್ರೀ ನರಸಿಂಹ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಸಂಸಾರಸಾಗರನಿಮಜ್ಜನಮುಹ್ಯಮಾನಂ | ದೀನಂ ವಿಲೋಕಯ ವಿಭೋ ಕರುಣಾನಿಧೇ ಮಾಮ್ || ಪ್ರಹ್ಲಾದಖೇದಪರಿಹಾರಪರಾವತಾರ | ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ||

## 2. ಚೆನ್ನಕೇಶವ ಸ್ವಾಮಿ ದೇವಸ್ಥಾನ, ಕೈದಾಳ

ತುಮಕೂರಿನಿಂದ ೯ ಕಿ.ಮೀ. ದೂರದಲ್ಲಿ ಚೆನ್ನಕೇಶವನ ಪುರಾತನ ದೇವಸ್ಥಾನವಿದೆ. ಈ ದೇವಸ್ಥಾನವು ಈಗ ಶಿಥಿಲಗೊಂಡಿದ್ದರೂ ಚೆನ್ನಕೇಶವನ ಸುಂದರ ಮೂರ್ತಿಯು ಜನರನ್ನು ಆಕರ್ಷಿಸುತ್ತದೆ. ಈ ಸುಂದರ ಮೂರ್ತಿಯನ್ನು ಕೆತ್ತಿದವನು ಇದೇ ಹಳ್ಳಿಯಲ್ಲಿ ಜನಿಸಿದ್ದ ಜಕಣಾಚಾರಿ ಎಂಬ ಶಿಲ್ಪಿ. ಈ ಮೂರ್ತಿಯನ್ನು ಕೆತ್ತುವ ಮುನ್ನ ಶಿಲ್ಪಕಲೆಯ ಹೊಸ ಆಯಾಮಗಳನ್ನು ಹುಡುಕುತ್ತ ಮತ್ತು ಮನಶ್ಶ್ಯಾಂತಿಗಾಗಿ ಅಲೆದಾಡುತ್ತಿದ್ದ ಜಕಣಾಚಾರಿಯು ಅದೃಷ್ಟವಶಾತ್ ಶ್ರೀ ರಾಮಾನುಜಾಚಾರ್ಯರನ್ನು ಭೇಟಿಯಾದನು. ರಾಮಾನುಜಾಚಾರ್ಯರು ಭಗವಂತನ ಸೇವೆಗಾಗಿ ಅವನ ಕಲೆಯನ್ನು ಬಳಸಿಕೊಂಡರು. ಹೊಯ್ಸಳ ದೊರೆ ಬಿಟ್ಟಿದೇವನ ಮಗಳ ಅನಾರೋಗ್ಯವನ್ನು ಶ್ರೀ ರಾಮಾನುಜಾಚಾರ್ಯರು ಗುಣಪಡಿಸಿದ್ದರಿಂದ ಬಿಟ್ಟಿದೇವನು ವೈಷ್ಣವ ಧರ್ಮದ ಅನುಯಾಯಿಯಾದನಲ್ಲದೇ, ಅವನಿಗೆ 'ವಿಷ್ಣುವರ್ಧನ' ಎಂದು ಆಚಾರ್ಯರು ಹೆಸರಿಟ್ಟು ವಿಷ್ಣುವಿಗಾಗಿ ದೇವಸ್ಥಾನಗಳನ್ನು ನಿರ್ಮಿಸುವಂತೆ ಸೂಚಿಸಿದರು. ಆಗ ದೇವಸ್ಥಾನದ ನಿರ್ಮಾಣಕ್ಕಾಗಿ ರಾಮಾನುಜಾಚಾರ್ಯರು ಜಕಣಾಚಾರಿಗೆ ಆಜ್ಞಾಪಿಸಿದರು. ಅವರ ಆಜ್ಞೆಯಂತೆ ಬೇಲೂರು ಹಳೆಬೀಡುಗಳಲ್ಲಿ ದೇವಸ್ಥಾನ ನಿರ್ಮಾಣದಲ್ಲಿ ತೊಡಗಿದ ಜಕಣಾಚಾರಿಯು ಕಲ್ಪನೆಗೂ ನಿಲುಕದ ಕೆತ್ತನಿಕೆಗಳಿಂದ ದೇವಸ್ಥಾನಗಳನ್ನು ಅಲಂಕರಿಸಿದನು. ವಿಷ್ಣುವರ್ಧನನ ರಾಣಿ ಶಾಂತಲಾ ದೇವಿಯ ಕೋರಿಕೆಯಂತೆ ಜಕಣಾಚಾರಿಯು ವಿಷ್ಣುವಿನ ಮೂರ್ತಿಯೊಂದನ್ನು ಕೆತ್ತಿದನು. ಅದರ ಅಪ್ರತಿಮ ಸೌಂದರ್ಯದಿಂದ ಪ್ರಭಾವಿತರಾದ ರಾಜ-ರಾಣಿಯರು ಅವನ ಕಲಾ ಪ್ರಾವಿಣ್ಯವನ್ನು ಮೆಚ್ಚಿದರು. ಆದರೆ ಆ ಮೂರ್ತಿಯಲ್ಲಿ ದೋಷವಿರುವುದು ಗೊತ್ತಾದಾಗ ಜಕಣಾಚಾರಿಯು ತನ್ನ ಬಲಗೈಯನ್ನು ಕತ್ತರಿಸಿಕೊಂಡನು. ವಿಷ್ಣುವಿನ ಇನ್ನೊಂದು ಮೂರ್ತಿಯನ್ನು ಬೇಲೂರಿನ ದೇವಸ್ಥಾನಕ್ಕಾಗಿ ಕೆತ್ತಿ ಕೊಟ್ಟ ಅನಂತರ ಜಕಣಾಚಾರಿಗೆ ತನ್ನ ಹುಟ್ಟೂರಿನಲ್ಲೊಂದು ವಿಷ್ಣುವಿನ ದೇವಸ್ಥಾನದ ನಿರ್ಮಾಣ ಮಾಡುವಂತೆ ದೈವಪ್ರೇರಣೆ- ಯಾಯಿತು. ಅದರಂತೆ ತನ್ನ ಒಂದು ಕೈ ಇಲ್ಲದಿದ್ದರೂ

ಅವನು ಚೆನ್ನಕೇಶವನ ಮೂರ್ತಿಯನ್ನು ಕೆತ್ತಿದನು. ಆ ದೇವಸ್ಥಾನದಲ್ಲಿ ಜಕಣಾಚಾರಿಯು ಇತರ ಭಕ್ತಾದಿಗಳೊಡನೆ ಕೀರ್ತನೆ ಮಾಡುತ್ತಿದ್ದಾಗ ಕತ್ತರಿಸಿ ಹೋಗಿದ್ದ ಅವನ ಕೈ ಮರಳಿ ಬಂದಿತೆಂದು ಸ್ಥಳೀಯರು ಹೇಳುತ್ತಾರೆ. ಅದರಿಂದ ಕೈದಾಳ ಎಂಬ ಹೆಸರು ಬಂದಿದೆ ಎನ್ನುವುದು ಪ್ರತೀತಿ.

5 ಅಡಿ 4 ಇಂಚು ಎತ್ತರವಿರುವ ಈ ಮೂರ್ತಿಯನ್ನು ಎರಡಡಿ ಪೀಠದ ಮೇಲೆ ಪಶ್ಚಿಮಾಭಿಮುಖ ಪ್ರತಿಷ್ಠಾಪಿಸಲಾಗಿದೆ. ವಿಗ್ರಹದ ಪ್ರಭಾವಳಿಯಲ್ಲಿ ದಶಾವತಾರದ ಕೆತ್ತನೆಗಳಿವೆ. ಎರಡಡಿ ಪೀಠದ ಮೇಲೆ ಇರುವ ಚೆನ್ನಕೇಶವನ ಅಕ್ಕ ಪಕ್ಕ ಬ್ರಹ್ಮ ಹಾಗೂ ಈಶ್ವರರಿದ್ದು, ಈ ರೀತಿಯ ಕೆತ್ತನೆ ಅಪರೂಪವಾದದ್ದು.

ದರ್ಶನ ಸಮಯ -

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಕೈದಾಳ ಪುರವರಾಧೀಶ್ವರ ಶ್ರೀ ಭೂದೇವೀ
ಶ್ರೀನೀಳಾದೇವೀ ಸಮೇತ ಶ್ರೀ ಚನ್ನಕೇಶವ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ |
ಸರ್ವದೇವನಮಸ್ಕಾರಾನ್ ಕೇಶವಂ ಪ್ರತಿಗಚ್ಛತಿ ||

## 3. ಮಹಾಲಕ್ಷ್ಮೀ ದೇವಸ್ಥಾನ ಗೊರವನಹಳ್ಳಿ

ಇದು ತುಮಕೂರು ಜಿಲ್ಲೆ ಕೊರಟಗೆರೆ ತಾಲೂಕಿನಲ್ಲಿ ಇರುವ ಒಂದು ಸಣ್ಣ ಗ್ರಾಮ. ಇಲ್ಲಿ ಇರುವ ಲಕ್ಷ್ಮಿ ದೇವಸ್ಥಾನವು ಧಾರ್ಮಿಕ ಶ್ರದ್ಧಾ ಕೇಂದ್ರವಾಗಿದೆ. ಈ ಗ್ರಾಮವು ತನ್ನಲ್ಲಿ ಇರುವ ಲಕ್ಷ್ಮಿ ದೇವಸ್ಥಾನದಿಂದಾಗಿ ಚಿರಪರಿಚಿತವಾಗಿದೆ. ಗ್ರಾಮದ ಕಮಲಮ್ಮ ಎಂಬುವವರು ಈ ದೇವಾಲಯವನ್ನು ನಿರ್ಮಿಸಿದರು ಹಾಗು ಅದರ ಉಸ್ತುವಾರಿ ವಹಿಸಿಕೊಂಡಿದ್ದರು. ಅವರ ಮರಣಾ ನಂತರ ಅವರ ಪುತ್ರರಾದ ಪ್ರಸನ್ನರವರು ಆಡಳಿತ ನೋಡಿಕೊಳ್ಳುತ್ತಿದ್ದಾರೆ. ಈ ದೇವಸ್ಥಾನದಲ್ಲಿ ಪ್ರತಿ ಮಂಗಳವಾರ, ಶುಕ್ರವಾರ ಹಾಗು ಭಾನುವಾರಗಳಂದು ವಿಶೇಷ ಪೂಜೆ ಇರುತ್ತದೆ. ದೇವಾಲಯದ ವತಿಯಿಂದ ಇಲ್ಲಿ ಪ್ರತಿದಿನ ಅಪರಾಹ್ನ ಊಟದ ವ್ಯವಸ್ಥೆ ಮಾಡಲಾಗಿದೆ. ದೇವಸ್ಥಾನದವರು ಇಲ್ಲಿ ಒಂದು ಕಲ್ಯಾಣ ಮಂಟಪವನ್ನು ನಿರ್ಮಿಸಿದ್ದಾರೆ. ಸಾರ್ವಜನಿಕರು ಅಗತ್ಯ ಹಣವನ್ನು ನೀಡಿ ಇದರ ಉಪಯೋಗ ಪಡೆದುಕೊಳ್ಳಬಹುದು. ಇಲ್ಲಿ ನೀರಾವರಿ ಮತ್ತು ಮೀನುಗಾರಿಕೆಗೆ ಒಂದು ಸಣ್ಣ

ಜಲಾಶಯವನ್ನು ನಿರ್ಮಿಸಲಾಗಿದೆ. ಮಳೆ ಮತ್ತು ಅಕ್ಕಿ ರಾಂಪುರ ಕೆರೆಯ ಹೆಚ್ಚುವರಿ ನೀರು ಗೊರವನಹಳ್ಳಿ ಕೆರೆಗೆ ಆಧಾರ. ಈ ಕೆರೆಯು ನೂರಾರು ಎಕರೆ ಗದ್ದೆ ಹಾಗು ತೋಟಗಳಿಗೆ ನೀರಾವರಿಯ ಅಧಾರವಾಗಿದೆ.

ದರ್ಶನ ಸಮಯ - ಬೆಳಗ್ಗೆ 8:00 ರಿಂದ ಸಂಜೆ 7:30

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಗೊರವನಹಳ್ಳಿ ಪುರವರಾಧೀಶ್ವರೀ ಶ್ರೀ
ಮನ್ನಾರಾಯಣ ಸ್ವಾಮೀ ಸಮೇತ ಶ್ರೀ ಮಹಾಲಕ್ಷ್ಮೀ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ಅಂಗಂ ಹರೇಃ ಪುಲಕ ಭೂಷಣ-ಮಾಶ್ರಯಂತೀ |
ಭೃಂಗಾಂಗನೇವ ಮುಕುಲಾ-ಭರಣಂ ತಮಾಲಮ್ ||
ಅಂಗೀಕೃತಾಖಿಲವಿಭೂತಿ-ರಪಾಂಗಲೀಲಾ | ಮಾಂಗಲ್ಯದಾಸ್ತು ಮಮ
ಮಂಗಲದೇವತಾಯಾಃ ||

## 4. ಸಿದ್ಧಗಂಗಾ ಮಠ ಸಿದ್ಧಗಂಗಾ

ಶ್ರೀ ಸಿದ್ದಗಂಗಾ ಮಠ ತುಮಕೂರು ನಗರದಿಂದ ಸುಮಾರು ಆರು ಕಿಲೋಮೀಟರುಗಳ ದೂರದಲ್ಲಿದೆ. ಹತ್ತಿರವೆಂದರೆ ಕ್ಯಾತಸಂದ್ರ ರೈಲು ನಿಲ್ದಾಣದಿಂದ ಅರ್ಧ ಕಿ.ಮಿ. ದೂರವಿದೆ. ಶ್ರೀಸಿದ್ಧಗಂಗ ಮಠ ತುಮಕೂರು ಮತ್ತು ಬೆಂಗಳೂರಿನ ಬಸ್ಸುಗಳಿಗೆ ಸುಲಭವಾಗಿ ಸಂಪರ್ಕವಿರುತ್ತದೆ. ಅನ್ನ, ವಿದ್ಯೆ ಮತ್ತು ವಸತಿಯ ಉಚಿತ ವ್ಯವಸ್ಥೆ ಇದ್ದು, ಇದೇ ಕಾರಣದಿಂದ ತ್ರಿವಿಧ ದಾಸೋಹದ ಕ್ಷೇತ್ರವೆಂದೇ ಪ್ರಸಿದ್ಧಿ ಪಡೆದಿದೆ. ಸುಮಾರು ಆರು ಸಾವಿರ ಮಕ್ಕಳಿಗೆ ತ್ರಿವಿಧ ದಾಸೋಹ ಕಾರ್ಯ ನಡೆಯುತ್ತಿದೆ.

ಕರ್ನಾಟಕ ರತ್ನ ಪ್ರಶಸ್ತಿಯನ್ನು ಡಾ||ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ನೀಡಲಾಗಿದೆ. ಶ್ರೀ ಕ್ಷೇತ್ರದ ಮಠಾಧಿಪತಿಗಳು ಶ್ರೀ ಸಿದ್ದಲಿಂಗಸ್ವಾಮಿಗಳು ಕ್ಷೇತ್ರದ ಹಿಂದಿನ ಮಠಾಧಿಪತಿಗಳು ಶ್ರೀಉದ್ದಾನ ಶಿವಯೋಗಿಗಳು. ಇವರು ಎಡೆಯೂರು ಸಿದ್ಧಲಿಂಗೇಶ್ವರರ ಶಿಷ್ಯಪರಂಪರೆಗೆ ಸೇರಿದವರಾಗಿದ್ದಾರೆ.

ಕ್ಷೇತ್ರದ ಪ್ರಮುಖ ದೇವಸ್ಥಾನಗಳು: ಶ್ರೀ ಸಿದ್ದಲಿಂಗೇಶ್ವರ ದೇವಸ್ಥಾನ, ಶ್ರೀ ಸಿದ್ದಗಂಗಾ ಮಾತೆ ದೇವಸ್ಥಾನ. ಡಾ||ಶ್ರೀ ಶಿವಕುಮಾರ ಸ್ವಾಮಿಗಳ ಗದ್ದುಗೆ

## 5. ತುಮಕೂರು ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ವೀರಭದ್ರ ದೇವಸ್ಥಾನ, ಚಿಕ್ಕನಾಯಕನಹಳ್ಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು
2. ಶ್ರೀ ಆಂಜನೇಯ ದೇವಸ್ಥಾನ, ಚಿಕ್ಕನಾಯಕನಹಳ್ಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು
3. ಶ್ರೀ ಯೋಗಮಾಧವ ದೇವಸ್ಥಾನ, ಸೆಟ್ಟಿಕರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು
4. ಶ್ರೀ ಗವಿರಂಗನಾಥ ಸ್ವಾಮಿ ದೇವಸ್ಥಾನ, ಗವಿರಂಗಪುರ, ಚಿಕ್ಕನಾಯಕನಹಳ್ಳಿ ತಾಲ್ಲೂಕು
5. ಕುಪ್ಪುರು ಗದ್ದಿಗೆ ಸಂಸ್ಥಾನ ಮಠ, ಕುಪ್ಪುರು, ಚಿಕ್ಕನಾಯಕನಹಳ್ಳಿ ತಾಲ್ಲೂಕು,
6. ಶ್ರೀ ಮಹಾಲಕ್ಷ್ಮಿ ದೇವಸ್ಥಾನ, ಗೋರವನಹಳ್ಳಿ, ಕೊರಟಗೆರೆ ತಾಲ್ಲೂಕು
7. ಶ್ರೀ ಸಿದ್ಧೇಶ್ವರ ದೇವಸ್ಥಾನ, ಸಿದ್ಧರಬೆಟ್ಟ, ಕೊರಟಗೆರೆ ತಾಲ್ಲೂಕು
8. ಶ್ರೀ ಚನ್ನಕೇಶವ ಸ್ವಾಮಿ ದೇವಸ್ಥಾನ, ಅಮೃತೂರು, ಕುಣಿಗಲ್ ತಾಲ್ಲೂಕು
9. ಶ್ರೀ ಕಸ್ತೂರಿ ರಂಗನಾಥ ದೇವಸ್ಥಾನ, ಬೆಟ್ಟದ ರಂಗನಾಥ, ಕುಣಿಗಲ್ ತಾಲ್ಲೂಕು
10. ಶ್ರೀ ಈಶ್ವರ ದೇವಸ್ಥಾನ, ಗಂಗೇನಹಳ್ಳಿ, ಕುಣಿಗಲ್ ತಾಲ್ಲೂಕು
11. ಶ್ರೀ ಅಂಜನೇಯ ದೇವಸ್ಥಾನ, ಕುಣಿಗಲ್, ಕುಣಿಗಲ್ ತಾಲ್ಲೂಕು
12. ಶ್ರೀ ವೆಂಕಟರಮಣ ದೇವಸ್ಥಾನ, ಕುಣಿಗಲ್, ಕುಣಿಗಲ್ ತಾಲ್ಲೂಕು
13. ಶ್ರೀ ಸೋಮೇಶ್ವರ ದೇವಸ್ಥಾನ, ಕುಣಿಗಲ್, ಕುಣಿಗಲ್ ತಾಲ್ಲೂಕು
14. ಶ್ರೀ ಲಕ್ಷ್ಮಿ ನರಸಿಂಹ ದೇವಸ್ಥಾನ, ಕುಣಿಗಲ್, ಕುಣಿಗಲ್ ತಾಲ್ಲೂಕು
15. ಶ್ರೀ ಪದ್ಮೇಶ್ವರ ದೇವಸ್ಥಾನ, ಕುಣಿಗಲ್, ಕುಣಿಗಲ್ ತಾಲ್ಲೂಕು
16. ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನ, ಯಡಿಯುರು, ಕುಣಿಗಲ್ ತಾಲ್ಲೂಕು

17. ಸುಬ್ರಹ್ಮಣ್ಯ ದೇವಸ್ಥಾನ, ನಾಗಲಮಡಿಕೆ, ಪಾವಗಡ ತಾಲ್ಲೂಕು
18. ಶ್ರೀ ಮಲ್ಲೇಶ್ವರ ಮತ್ತು ಶ್ರೀ ವೆಂಕಟೇಶ್ವರ ದೇವಸ್ಥಾನ, ಮಧುಗಿರಿ, ಮಧುಗಿರಿ ತಾಲ್ಲೂಕು
19. ಶ್ರೀ ನರಸಿಂಹ ದೇವಸ್ಥಾನ, ಸೀಬಿ, ಸಿರಾ ತಾಲ್ಲೂಕು
20. ಶ್ರೀ ಭೋಗ ಮತ್ತು ಯೋಗ ನರಸಿಂಹ ದೇವಸ್ಥಾನ, ದೇವರಾಯನ ದುರ್ಗಾ, ತುಮಕೂರು ತಾಲ್ಲೂಕು
21. ಶ್ರೀ ಕಾಮಾಕ್ಷಿ ಶರದಾ ಪೀಠ ದೇವಸ್ಥಾನ, ಹೆಬ್ಬುರು, ತುಮಕೂರು ತಾಲ್ಲೂಕು
22. ಶ್ರೀ ಚನ್ನಕೇಶವ ದೇವಸ್ಥಾನ, ಕೈದಳ, ತುಮಕೂರು ತಾಲ್ಲೂಕು
23. ಕೋಟೆ ಆಂಜನೇಯ ದೇವಸ್ಥಾನ, ಅಮಣಿ ಕೆರೆ, ತುಮಕೂರು ಪಟ್ಟಣ
24. ರಾಮಕೃಷ್ಣ ವಿವೇಕಾನಂದ ಆಶ್ರಮ, ರಾಮಕೃಷ್ಣ ನಗರ, ತುಮಕೂರು ಪಟ್ಟಣ
25. ಶ್ರೀ ರಾಘವೇಂದ್ರ ಸ್ವಾಮಿ ಮಠ, ರಾಘವೇಂದ್ರ ನಗರ, ತುಮಕೂರು ಪಟ್ಟಣ
26. ಶ್ರೀ ಜೈನ್ ಆಗಮ ಮಂದಿರ, ಸಿರಾ ರಸ್ತೆ, ತುಮಕೂರು ಪಟ್ಟಣ
27. ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನ, ಸಿದ್ದಗಂಗ ಮಠ, ಸಿದ್ದಗಂಗೆ ಕ್ಷೇತ್ರ, ತುಮಕೂರು ತಾಲ್ಲೂಕು
28. ಶ್ರೀ ದಿಗಂಬರ ಜೈನ ಬಸದಿ ಮಂದಾರಗಿರಿ, ತುಮಕೂರು ತಾಲ್ಲೂಕು
29. ಶ್ರೀ ಚನ್ನಕೇಶವ ದೇವಸ್ಥಾನ, ಅರಳುಗುಪ್ಪೆ, ತುರುವೇಕೆರೆ ತಾಲ್ಲೂಕು
30. ಶ್ರೀ ಚನ್ನಕೇಶವ, ಶ್ರೀ ಕೇದಾರೇಶ್ವರ ದೇವಸ್ಥಾನ, ನಾಗಲಾಪುರ (ಎಎಸ್ಐ), ತುರುವೇಕೆರೆ ತಾಲ್ಲೂಕು
31. ಶ್ರೀ ವೇಣುಗೋಪಾಲ, ಶ್ರೀ ಬೇಟೆರಾಯ ದೇವಸ್ಥಾನ, ನೊಣವಿನಕೆರೆ, ತುರುವೆಕೆರೆ ತಾಲ್ಲೂಕು
32. ಶ್ರೀ ಕಲ್ಲೇಶ್ವರ ದೇವಸ್ಥಾನ, ತಂಡಗ, ತುರುವೆಕೆರೆ ತಾಲ್ಲೂಕು
33. ಶ್ರೀ ವೇಣುಗೋಪಾಲ ದೇವಸ್ಥಾನ, ತಂಡಗ, ತುರುವೆಕೆರೆ ತಾಲ್ಲೂಕು

34. ಶ್ರೀ ಲಕ್ಷ್ಮಿ ಬೇಟೆರಾಯ ದೇವಸ್ಥಾನ, ತುರುವೆಕೆರೆ, ತುರುವೆಕೆರೆ ತಾಲ್ಲೂಕು

35. ಶ್ರೀ ಚನ್ನಕೇಶವ ದೇವಸ್ಥಾನ, ತುರುವೆಕೆರೆ, ತುರುವೇಕೆರೆ ತಾಲ್ಲೂಕು

36. ಶ್ರೀ ಗಂಗಾಧರೇಶ್ವರ ದೇವಸ್ಥಾನ, ತುರುವೆಕೆರೆ, ತುರುವೇಕೆರೆ ತಾಲ್ಲೂಕು

37. ಶ್ರೀ ಮೂಲೆ ಶಂಕರ ದೇವಸ್ಥಾನ, ತುರುವೆಕೆರೆ, ತುರುವೇಕೆರೆ ತಾಲ್ಲೂಕು

38. ಶ್ರೀ ಕೆಂಪಮ್ಮ ದೇವಿ ಮತ್ತು ಆಂಜನೇಯ ದೇವಸ್ಥಾನ, ಬಜಗೂರು, ತಿಪಟೂರು

# 14. ಚಿತ್ರದುರ್ಗ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಚಿತ್ರದುರ್ಗ ಒಂದು ದಕ್ಷಿಣಬಳನಾಡಿನ ಜಿಲ್ಲೆ. ಈ ಜಿಲ್ಲೆಯನ್ನು ಬಳ್ಳಾರಿ, ದಾವಣಗೆರೆ, ಚಿಕ್ಕಮಗಳೂರು, ತುಮಕೂರು ಜಿಲ್ಲೆಗಳು ಮತ್ತು ಆಂಧ್ರಪ್ರದೇಶಗಳು ಸುತ್ತುವರಿದಿವೆ. ಚಿತ್ರದುರ್ಗ ನಗರವೇ ಜಿಲ್ಲಾ ಕೇಂದ್ರ. ಚಿತ್ರದುರ್ಗ, ಹೊಸದುರ್ಗ, ಹೊಳಲ್ಕೆರೆ, ಚಳ್ಳಕೆರೆ, ಹಿರಿಯೂರು, ಮೊಳಕಾಲ್ಮೂರು, ಎಂಬ 6 ತಾಲ್ಲೂಕುಗಳನ್ನು ಹೊಂದಿದೆ.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ರಂಗಯ್ಯನ ಬಾಗಿಲು, ಚಿತ್ರದುರ್ಗ




## 1. ಜಗದ್ಗುರು ಮುರುಘರಾಜೇಂದ್ರ ಬೃಹನಮಠ, ಚಿತ್ರದುರ್ಗ

ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನಮಠ ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಒಂದು ಅಸಾಧಾರಣ ಸಂಸ್ಥೆಯಾಗಿದೆ. ಈ ಮಠವು ಚಿತ್ರದುರ್ಗದ ಪಶ್ಚಿಮ ಭಾಗದ ಸುಂದರ ಮತ್ತು ಪ್ರಶಾಂತವಾದ ಸ್ಥಳದಲ್ಲಿದೆ. ಈ ಹೆಸರಾಂತ ಸಂಪ್ರದಾಯದ ಮಠವು ಮೂರು

ಶತಮಾನಗಳಿಂದ ಸಾಮಾಜಿಕ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡು ರಾಜ್ಯದ ಅಭಿವೃದ್ಧಿಯಲ್ಲಿ ಸೇವೆ ಒದಗಿಸುತ್ತಿದೆ. ಈ ಅಭಿವೃದ್ಧಿ ಕಾರ್ಯಗಳಿಂದ ಇದು ಒಂದು ದೇಶದ ದೊಡ್ಡ ಆಸ್ತಿ ಹಾಗೂ ಉನ್ನತ ಸ್ಥಾನ ಹೊಂದಿದೆ.

ಶಿಕ್ಷಣ ಪ್ರಸಾರವೇ ಸಮಾಜದ ಏಳಿಗೆಗೆ ಕಾರಣವೆಂಬುದನ್ನು ಬೃಹನ್ಮಠ ಹಿಂದಿನಿಂದಲೂ ಪಾಲಿಸಿಕೊಂಡು ಬಂದಿದೆ. ಕರ್ನಾಟಕದಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಶಾಲಾ ಕಾಲೇಜುಗಳು, ಪ್ರಸಾದ ನಿಲಯಗಳು ಇವನ್ನು ನಡೆಸುತ್ತಿರುವ ಕೆಲವೇ ಧಾರ್ಮಿಕ ಸಂಸ್ಥೆಗಳಲ್ಲಿ ಬೃಹನ್ಮಠವೂ ಒಂದಾಗಿದೆ.

ಹಲವು ವರ್ಷಗಳಿಂದ ಉಚಿತ ಸಾಮೂಹಿಕ ವಿವಾಹಗಳು ಮತ್ತು ಶ್ರೀಮಠಕ್ಕೆ ಪರಸ್ಥಳಗಳಿಂದ ಬಂದು ಹೋಗುವ ಜನರಿಗೆ ನಿತ್ಯದಾಸೋಹ.

ಮುರುಘವನ, ವಸ್ತು ಸಂಗ್ರಹಾಲಯ,

## 2. ತೇರು ಮಲ್ಲೇಶ್ವರ ದೇವಸ್ಥಾನ, ಹಿರಿಯೂರು

ಶ್ರೀ ತೇರುಮಲ್ಲೇಶ್ವರ ದೇವಸ್ಥಾನವು ವೇದಾವತಿ ನದಿಯ ಬಲ ದಂಡೆಯಲ್ಲಿರುವ ಹಿರಿಯೂರು ಪಟ್ಟಣದಲ್ಲಿದೆ. ಜನವರಿ ಅಥವಾ ಫೆಬ್ರವರಿಯಲ್ಲಿ ಹುಣ್ಣಿಮೆಯಿಂದ ಪ್ರಾರಂಭವಾಗುವ ಒಂದು ವಾರದವರೆಗೆ "ತೇರು ಮಲ್ಲೇಶ್ವರ" ಜಾತ್ರೆ ಆಚರಿಸಲಾಗುತ್ತದೆ ತೇರು ಮಲ್ಲೇಶ್ವರ ದೇವಸ್ಥಾನವು ಭಾರತದ ಪುರಾತತ್ವ ಸಮೀಕ್ಷೆಯ ಕರ್ನಾಟಕ ರಾಜ್ಯ ವಿಭಾಗದ ಅಡಿಯಲ್ಲಿ ಸಂರಕ್ಷಿತ ಸ್ಮಾರಕವಾಗಿದೆ.

ಈ ದೇವಾಲಯವು ಎತ್ತರದ ಗೋಪುರದೊಂದಿಗೆ ದ್ರಾವಿಡ ಶೈಲಿಯ ವಾಸ್ತುಶಿಲ್ಪವನ್ನು ಹೊಂದಿದೆ. ಮುಖಮಂಟಪದ ಅಂಕಣಗಳಲ್ಲಿ "ಶಿವಪುರಾಣ" ಮತ್ತು ರಾಮಾಯಣದ ದೃಶ್ಯಗಳನ್ನು ಬಿಂಬಿಸುವ ಭಿತ್ತಿಚಿತ್ರಗಳಿವೆ. ಈ ದೇವಾಲಯವು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯಲ್ಲಿ ಸುಮಾರು 1466 ರಲ್ಲಿ ನಿರ್ಮಿಸಲ್ಪಟ್ಟಿದೆ.

## 3. ಚಿತ್ರದುರ್ಗ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗರೆ, ಚಿತ್ರದುರ್ಗ ತಾಲ್ಲೂಕು
2. ಶ್ರೀ ಸಂಪೀಗೆ ಸಿದ್ಧೇಶ್ವರ, ಶ್ರೀ ಹಿಡಿಂಬೇಶ್ವರ, ಶ್ರೀ ಫಾಲ್ಗುನೇಶ್ವರ, ಶ್ರೀ ಗೋಪಾಲಕೃಷ್ಣ, ಶ್ರೀ ಗಣೇಶ, ಶ್ರೀ ಅಂಜನೇಯ ಮತ್ತು ಶ್ರೀ ಏಕನಾಥೇಶ್ವರಿ, ಶ್ರೀ ಒಂಟಿಕಲ್ಲು ಬಸವಣ್ಣ ದೇವಾಲಯಗಳು, ಚಿತ್ರದುರ್ಗ ಕೋಟೆ ಚಿತ್ರದುರ್ಗ ತಾಲ್ಲೂಕು
3. ಶ್ರೀ ಉಚಂಗಿ ದೇವಿ ದೇವಸ್ಥಾನ, ಚಿತ್ರದುರ್ಗ, ಚಿತ್ರದುರ್ಗ ತಾಲ್ಲೂಕು
4. ಶ್ರೀ ವೀರಭದ್ರಸ್ವಾಮಿ ದೇವಸ್ಥಾನ ಮತ್ತು ಕರಿಸಿದ್ದೇಶ್ವರ ಮಠ, ರಾಮಗಿರಿ (ಏರಲು 300 ಮೆಟ್ಟಿಲುಗಳು), ಹೊಳಲಕೆರೆ ತಾಲ್ಲೂಕು
5. ಶ್ರೀ ಲಕ್ಷ್ಮಿ ನರಸಿಂಹ ದೇವಸ್ಥಾನ, ಹೊರಕೆರೆದೇವಪುರ, ಹೊಳಲಕರೆ ತಾಲ್ಲೂಕು
6. ಶ್ರೀ ಹಾಲುರಾಮೇಶ್ವರ ದೇವಸ್ಥಾನ, ನರಸೀಪುರ (ಎಂಡಿಕೆ), ಹೊಸದುರ್ಗ ತಾಲ್ಲೂಕು

# 15. ದಾವಣಗೆರೆ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ದಾವಣಗೆರೆ ಒಂದು ದಕ್ಷಿಣಬಳನಾಡಿನ ಜಿಲ್ಲೆಯಾಗಿದೆ. ದಾವಣಗೆರೆ ನಗರವು ಜಿಲ್ಲಾ ಕೇಂದ್ರವಾಗಿದೆ. ದಾವಣಗೆರೆ ಜಿಲ್ಲೆಯು ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ಹಾವೇರಿ ಜಿಲ್ಲೆಗಳಿಂದ ಸುತ್ತುವರಿದಿದೆ. ಈ ಜಿಲ್ಲೆಯು ಚನ್ನಗಿರಿ, ದಾವಣಗೆರೆ, ಹರಿಹರ, ಹೊನ್ನಾಳಿ, ಜಗಳೂರು, ನ್ಯಾಮತಿ ಎಂಬ 6 ತಾಲ್ಲೂಕುಗಳನ್ನು ಹೊಂದಿದೆ.

ತುಂಗಭದ್ರಾ, ಚಿಕ್ಕಹಗರಿ ನದಿಗಳು ಈ ಜಿಲ್ಲೆಯಲ್ಲಿ ಹರಿಯುತ್ತವೆ. ಬೆಣ್ಣೆದೋಸೆ, ಹತ್ತಿ ಬಟ್ಟೆಗಳು, ಇಲ್ಲಿಯ ವಿಶೇಷತೆಗಳು.


DAVANAGERE DISTRICT
KARNATAKA
N
BELLARY DISTRICT
HAVERI DISTRICT
HARPANAHALLI
JAGALUR
HARIHAR
DAVENGERE
HONNALI
CHITRADURGA DISTRICT
CHANNAGIRI
SHIMOGA DISTRICT
CHIKMAGALUR DISTRICT
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters

## 1. ಹರಿಹರೇಶ್ವರ ದೇವಸ್ಥಾನ ಹರಿಹರ

ದಾವಣಗೆರೆ ಜಿಲ್ಲೆಯ ಹರಿಹರ ಪಟ್ಟಣದಲ್ಲಿ, ತುಂಗಭದ್ರಾ ನದಿಯ ಬಲದಂಡೆಯಮೇಲೆ ಹರಿಹರೇಶ್ವರ ದೇವಸ್ಥಾನವನ್ನು ಹೊಯ್ಸಳರು ಕ್ರಿ.ಶ. 1224 ರಲ್ಲಿ ನಿರ್ಮಿಸಿದರು. ಹರಿಹರವು ಹೆಸರೆ ಸೂಚಿಸುವ ಹಾಗೆ ಹರಿ ಅಂದರೆ ವಿಷ್ಣು ಹಾಗೂ ಹರ ಅಂದರೆ ಶಿವನು ಒಟ್ಟಾಗಿ ಸಂಯುಕ್ತ ರೂಪದಲ್ಲಿ ಹರಿಹರನಾಗಿ ನೆಲೆಸಿರುವ ಕ್ಷೇತ್ರ. (ಇದನ್ನು ಸಂಭು-ವಿಷ್ಣು ಮತ್ತು ಶಂಕರ-ನಾರಾಯಣ ಎಂದೂ ಕರೆಯುತ್ತಾರೆ) ಈ ದೇವಾಲಯವು ತಳ ವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ನವರಂಗ ಹಾಗೂ ಮಹಾ ಮಂಡಪವನ್ನೊಳಗೊಂಡಿದ್ದು ಅದಕ್ಕೆ ಸೇರಿದಂತೆ ಸ್ತಂಭಗಳುಳ್ಳ ಮಂಟಪವಿದೆ ಮತ್ತು ದೇವಾಲಯವು ಪೂರ್ವಾಭಿಮುಖವಾಗಿದೆ. ಪ್ರವೇಶದ್ವಾರದ ಬಲ ಪೇದ್ಯದಲ್ಲಿ ಇಬ್ಬರು ಶೈವ ದ್ವಾರಪಾಲಕರೂ, ಹಾಗೂ ಎಡ ಪೇದ್ಯದಲ್ಲಿ ಇಬ್ಬರು ವೈಷ್ಣವ ದ್ವಾರಪಾಲಕರಿರುವರು.

ಗರ್ಭಗುಡಿಯಲ್ಲಿರುವ ಮೂಲಮೂರ್ತಿ ಹರಿಹರೇಶ್ವರನು ಸುಮಾರು 1.21 ಮೀ. ಎತ್ತರವಿದ್ದು, ಪೀಠದ ಮೇಲೆ ನಿಂತಿದ್ದಾನೆ. ಹರಿಹರ ವಿಗ್ರಹದ ಬಲಭಾಗದಲ್ಲಿ ಶಿವನ ತ್ರಿಶೂಲ್ ಮತ್ತು ಕೂದಲನ್ನು ತಪಸ್ವಿ ಎಂದು ಕೆತ್ತಲಾಗಿದೆ ಮತ್ತು ಈ ಮೂರ್ತಿಯು ಎಡಭಾಗವು ವಿಷ್ಣುವಿನ ಅಂಶವನ್ನೊಳಗೊಂಡಿದ್ದು ಎಡಭಾಗದ ಎರಡು ಕೈಗಳಲ್ಲಿ ಶಂಕ ಮತ್ತು ಚಕ್ರವನ್ನು ಹಿಡಿದಿದ್ದಾನೆ ತಲೆಯಲ್ಲಿ ಕಿರೀಟವನ್ನು ದರಿಸಿದ್ದಾನೆ. ಮಂಟಪಗಳಲ್ಲಿ ಸುಂದರವಾಗಿ ಹೊಳೆಯುವ ಕಲ್ಲಿನ ಕಂಬಗಳು ಗಮನ ಸೆಳೆಯುತ್ತವೆ. ಅಲ್ಲದೆ ಈ ದೇವಾಲಯದ ಮಹಾದ್ವಾರದ ಎರಡು ಪಾರ್ಶ್ವಗಳಲ್ಲಿ ದೀಪಸ್ತಂಬಗಳು ಕಂಡುಬರುತ್ತವೆ.

ತುಂಗಭದ್ರ ದಂಡೆಯಲ್ಲಿ ರಾಘವೇಂದ್ರ ಮಠವನ್ನು ಕೂಡ ಹೊಂದಿದೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಹರಿಹರ ಪುರವರಾಧೀಶ್ವರ ಶ್ರೀ ಲಕ್ಷ್ಮೀದೇವೀ ಶ್ರೀಪಾರ್ವತೀದೇವೀ ಸಮೇತ ಶ್ರೀ ಹರಿಹರೇಶ್ವರ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ |
ಶಿವಸ್ಯ ಹೃದಯಂ ವಿಷ್ಣುರ್ ವಿಷ್ಣೋಶ್ಚ ಹೃದಯಂ ಶಿವಃ ||

## 2. ದಾವಣಗೆರೆ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ದುರ್ಗಾಂಬಿಕಾ ದೇವಸ್ಥಾನ, ದಾವಣಗೆರೆ, ದಾವಣಗರೆ ತಾಲ್ಲೂಕು
2. ಶ್ರೀ ರಂಗನಾಥಸ್ವಾಮಿ ದೇವಾಲಯ ನೀರ್ಥಡಿ, ದಾವಣಗೆರೆ ತಾಲ್ಲೂಕು
3. ಶ್ರೀ ಉಚ್ಚಂಗಿ ದುರ್ಗಾ ದೇವಿ ದೇವಾಲಯ ಉಚ್ಚಂಗಿದುರ್ಗ (ಎಎಸ್ಐ), ದಾವಣಗೆರೆ ತಾಲ್ಲೂಕು
4. ಶ್ರೀ ಕಲ್ಲೇಶ್ವರ ದೇವಸ್ಥಾನ, ಬಗಲಿ (ಎಎಸ್ಐ), ಹರಪನಹಳ್ಳಿ ತಾಲ್ಲೂಕು
5. ಶ್ರೀ ಭೀಮೇಶ್ವರ ದೇವಸ್ಥಾನ, ನೀಲಗುಂದ, (ಎಎಸ್ಐ) ಹರಪನಹಳ್ಳಿ ತಾಲ್ಲೂಕು
6. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ಹೊನ್ನಾಳಿ, ಹೊನ್ನಾಳಿ ತಾಲ್ಲೂಕು
7. ಶ್ರೀ ಲಕ್ಷ್ಮಿ ನರಸಿಂಹ ದೇವಸ್ಥಾನ, ಮಾಲೆಬೆನ್ನೂರು ,ಹೊನ್ನಾಳಿ ತಾಲ್ಲೂಕು
8. ಶ್ರೀ ನಂದಿ ದೇವಸ್ಥಾನ, ನಂದಿತಾವರೆ, ಹೊನ್ನಾಳಿ ತಾಲ್ಲೂಕು

# 16. ಹಾವೇರಿ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಹಾವೇರಿ ಜಿಲ್ಲೆಯು ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಹಾವೇರಿ ನಗರವು ಜಿಲ್ಲಾ ಕೇಂದ್ರವಾಗಿದೆ. ಹಾವೇರಿ ಜಿಲ್ಲೆಯು ಧಾರವಾಡ, ಗದಗ, ಬಳ್ಳಾರಿ, ದಾವಣಗೆರೆ, ಶಿವಮೊಗ್ಗ, ಉತ್ತರಕನ್ನಡ ಜಿಲ್ಲೆಗಳಿಂದ ಸುತ್ತುವರಿದಿದೆ. ಈ ಜಿಲ್ಲೆಯು ಹಾವೇರಿ, ರಾಣಿಬೆನ್ನೂರು, ಹಿರೇಕೆರೂರು, ಹಾನಗಲ್, ಶಿಗ್ಗಾಂವ್, ಸವಣೂರು, ಬ್ಯಾಡಗಿ ಎಂಬ 7 ತಾಲ್ಲೂಕುಗಳನ್ನು ಹೊಂದಿದೆ.

ತುಂಗಭದ್ರಾ, ವರದಾ, ಕುಮುದ್ವತಿ, ಧರ್ಮಾ ನದಿಗಳು

ಬ್ಯಾಡಗಿ ಮೆಣಸಿನಕಾಯಿ


HAVERI DISTRICT
KARNATAKA
DHARWAD DISTRICT
N
GADAG DISTRICT
BELLARY DISTRICT
UTTARA KANNADA DISTRICT
SHIGGAON
SAVANNUR
HAVERI
HANGAL
BYADGI
RANIBENNUR
HIREKERUR
SHIMOGA DISTRICT
DAVANAGERE DISTRICT
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters

## 1. ಮುಕ್ತೇಶ್ವರಸ್ವಾಮಿ ದೇವಾಲಯ, ಚೌಡಯ್ಯದಾನಪುರ

ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕಿನಲ್ಲಿ ತುಂಗಭದ್ರ ನದಿಯ ದಡದಲ್ಲಿರುವ ಚೌಡಯ್ಯದಾನಪುರದಲ್ಲಿರುವ ಸುಂದರವಾದ ಮುಕ್ತೇಶ್ವರನ ದೇವಾಲಯವು 12ನೇ ಶತಮಾನದಲ್ಲಿ ಚಾಲುಕ್ಯರಿಂದ ನಿರ್ಮಿಸಲ್ಪಟ್ಟಿತು. ದಂತಕಥೆಯ ಪ್ರಕಾರ, ಈ ದೇವಾಲಯವು ತುಂಗಭದ್ರ ನದಿಯು ಹರಿಯುವ ದಿಕ್ಕನ್ನು ಬದಲಾಯಿಸುವ ಸ್ಥಾನದಲ್ಲಿ ನೆಲೆಗೊಂಡಿದ್ದು, ಹೊಸ ಪಥದ ಪ್ರಾರಂಭದ ಸೂಚನೆಯಾಗಿದೆ ಹಾಗು ಮುಕ್ತಿಯ/ಮೋಕ್ಷದ ಸಂಕೇತವೂ ಆಗಿರುವುದರಿಂದ, ಈ ಸ್ಥಳಕ್ಕೆ ಮುಕ್ತಿಕ್ಷೇತ್ರವೆಂದೂ ಕರೆಯಲಾಗುತ್ತದೆ. ಇಲ್ಲಿ ಮುಕ್ತೇಶ್ವರಸ್ವಾಮಿಯನ್ನು (ಮುಕ್ತಿಯನ್ನು ನೀಡುವ ದೇವರನ್ನು) ಪೂಜಿಸುತ್ತಾರೆ. ಸಾಮಾನ್ಯವಾಗಿ ನೋಡಿದರೆ, ನಮ್ಮ ಪೂರ್ವಜರು ದೇವಾಲಯಗಳನ್ನು ನಿರ್ಮಿಸಲು ನದಿಯ ದಡಕ್ಕೆ ಸಮೀಪದಲ್ಲಿರುವ ಸ್ಥಳಗಳನ್ನು ಅಥವಾ ಬೆಟ್ಟದ ಶಿಖರಗಳನ್ನು ಪವಿತ್ರ ಮತ್ತು ಸರಿಯಾದ ಜಾಗವೆಂದು ಪರಿಗಣಿಸುತ್ತಿದ್ದರು.

"ದೇವಾಲಯದ ಸಂಕೀರ್ಣವು ಮುಕ್ತೇಶ್ವರಸ್ವಾಮಿಯ ಮುಖ್ಯ ದೇವಸ್ಥಾನವನ್ನು, ಕಲ್ಲಿದೇವನ ದೇವಸ್ಥಾನವನ್ನು, ಎರಡು ಸಣ್ಣ ಶಿವನ ದೇವಾಲಯಗಳನ್ನು ಹಾಗು ನಾಲ್ಕು ವಿಭಾಗಗಳನ್ನು ಹೊಂದಿರುವ ದೇವಸ್ಥಾನವೊಂದನ್ನು (ಎರಡು ಭಾಗಗಳನ್ನು ಶಿವದೇವನಿಗೆ, ಒಂದನ್ನು ವೀರಭದ್ರಸ್ವಾಮಿಗೆ ಹಾಗು ಮತ್ತೊಂದನ್ನು ಚಾಮುಂಡಿ ದೇವಿಗೆ ಸಮರ್ಪಿಸಲಾಗಿದೆ) ಒಳಗೊಂಡಿದೆ. ಸಂಕೀರ್ಣದ ಪ್ರವೇಶದ್ವಾರದಲ್ಲಿ ಸುಮಾರು ೩೦ ಅಡಿ ಎತ್ತರದ ಸ್ತಂಭವು ನಿಂತಿದೆ. ದೇವಾಲಯದ ಸಂಕೀರ್ಣದಲ್ಲಿ ಸಂತ ಶಿವದೇವರ ಗದ್ದುಗೆಯೂ ಕಾಣಿಸುತ್ತದೆ. ಇಡೀ ದೇವಾಲಯವನ್ನು ಬಹಳ ಚೆನ್ನಾಗಿ ನಿರ್ವಹಿಸಲಾಗುತ್ತಿದೆ.

ಮುಕ್ತೇಶ್ವರನ ದೇವಾಲಯವು ದ್ವಿಕೂಟ ದೇವಾಲಯವಾಗಿದ್ದು, ಎರಡು ಗರ್ಭಗೃಹಗಳನ್ನು ಹೊಂದಿದೆ. ಈ ದೇವಾಲಯವು ಚಾಲುಕ್ಯರ ಯುಗದ ಶೈಲಿ, ಸಂಸ್ಕೃತಿ, ಹಾಗು ವಾಸ್ತುಶಿಲ್ಪವನ್ನು ಚಿತ್ರಿಸುವ ಮೇರುಕೃತಿಯಾಗಿದೆ. ಈ ದೇವಾಲಯವು ಚಾಲುಕ್ಯರ ಯುಗದ ಶೈಲಿ, ಸಂಸ್ಕೃತಿ, ಹಾಗು ವಾಸ್ತುಶಿಲ್ಪವನ್ನು ಚಿತ್ರಿಸುವ ಮೇರುಕೃತಿಯಾಗಿದೆ. ಜಕಣಾಚಾರಿ ಶೈಲಿಯ ವಾಸ್ತುಶಿಲ್ಪವನ್ನು ಹೊಂದಿರುವ ಈ ದೇವಾಲಯಕ್ಕೆ ಪೂರ್ವಾಭಿಮುಖ ಹಾಗು ದಕ್ಷಿಣಾಭಿಮುಖಗಳಲ್ಲಿ ಎರಡು ಪ್ರವೇಶದ್ವಾರಗಳಿವೆ. ಎರಡೂ ಪ್ರವೇಶದ್ವಾರಗಳು ಸುಂದರವಾದ ಮುಖಮಂಟಪಗಳನ್ನು ಹೊಂದಿದೆ. ಬಾಗಿಲಿನ ಚೌಕಟ್ಟುಗಳು

ಅಲಂಕಾರಿಕವಾಗಿ ಹಾಗು ಅತಿಶ್ರೇಷ್ಠವಾಗಿದ್ದು, ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪವನ್ನು ವರ್ಣಿಸುತ್ತದೆ. ಮುಖ್ಯದ್ವಾರಗಳ ಬಾಗಿಲುಗಳ ಲಲಾಟದಲ್ಲಿ ಮಹೇಶ್ವರಸ್ವಾಮಿಯ ಉಬ್ಬುಶಿಲ್ಪಗಳಿವೆ. ಗರ್ಭಗೃಹದಲ್ಲಿ ಸಣ್ಣ ಶಿವಲಿಂಗವಿದೆ. ಸುಖನಾಸಿಯ ಬಾಗಿಲ ಚೌಕಟ್ಟು ಸಹ ಬಹಳ ನೈಪುಣ್ಯತೆಯಿಂದ ನಿರ್ವಹಿಸಲಾಗಿದೆ. ಪೂರ್ವದಲ್ಲಿರುವ ಪ್ರವೇಶದ್ವಾರದ ಎದುರು ಮಂಟಪವಿದೆ. ದೇವಾಲಯದ ಹೊರಗೋಡೆಗಳು ಶಿವನ, ಗಣೇಶನ, ಸರಸ್ವತಿಯ, ಕೃಷ್ಣನ, ಸೂರ್ಯನ, ಹಾಗು ಇತರ ದೇವ ದೇವತೆಗಳ ಕೆತ್ತನೆಗಳನ್ನು ಹೊಂದಿವೆ. ಹೊರಗಿನ ಗೋಡೆಯ ಮೇಲಿನ ಕಲಾತ್ಮಕ ರಚನೆಯು ಶ್ಲಾಘನೀಯವಾದುದು. ಅರ್ಚಕರ ಗೈರುಹಾಜರಿಯಲ್ಲಿಯೂ ಈ ದೇವಾಲಯದ ಬಾಗಿಲು ದಿನವಿಡೀ ತೆರೆದಿರುತ್ತದೆ. ನಿಸ್ಸಂಶಯವಾಗಿ, ಈ ದೇವಾಲಯವನ್ನು ಒಳ್ಳೆಯ ನಿರ್ವಹಣೆಯುಳ್ಳ ದೇವಾಲಯಗಳಲ್ಲೊಂದೆಂದು ಪರಿಗಣಿಸಬಹುದು.

## 2. ಹಾವೇರಿ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಆದಿಕೇಶವ, ಶ್ರೀ ಕಾಳಹಸ್ಥೇಶ್ವರ, ಶ್ರೀ ಲಕ್ಷ್ಮಿ, ಶ್ರೀ ಸೋಮೇಶ್ವರ, ಶ್ರೀ ವಿರಭದ್ರ, ಶ್ರೀ ನರಸಿಂಹ, ಶ್ರೀ ಸಂಗಮೇಶ್ವರ ದೇವಾಲಯಗಳು, ಕನಕ ಗುರು ಪೀಠ, ಕಾಗಿನೆಲೆ, ಬ್ಯಾಡಗಿ ತಾಲ್ಲೂಕು
2. ಶ್ರೀ ಕಲ್ಮೇಶ್ವರ, ಶ್ರೀ ಸೋಮೇಶ್ವರ ದೇವಸ್ಥಾನಗಳು, ಬಾಳಂಬೀಡ, ಹಾನಗಲ್ ತಾಲ್ಲೂಕು
3. ಶ್ರೀ ಸೋಮೇಶ್ವರ ದೇವಸ್ಥಾನ, ಕಲ್ಕೆರಿ, ಹಾನಗಲ್ ತಾಲ್ಲೂಕು
4. ಶ್ರೀ ತಾರಕೇಶ್ವರ, ಶ್ರೀ ಗಣಪತಿ, ಶ್ರೀ ಬಿಲ್ವೇಶ್ವರ ದೇವಸ್ಥಾನಗಳು, ಹಾನಗಲ್, ಹಾನಗಲ್ ತಾಲ್ಲೂಕು
5. ಶ್ರೀ ಶಾಂತೇಶ್ವರ ದೇವಸ್ಥಾನ, ತಿಳವಳ್ಳಿ, ಹಾನಗಲ್ ತಾಲ್ಲೂಕು
6. ಶ್ರೀ ಕದಂಬೇಶ್ವರ ದೇವಸ್ಥಾನ, ರಟ್ಟೆಹಳ್ಳಿ, ಹಿರೇಕೆರೂರು ತಾಲ್ಲೂಕು
7. ಶ್ರೀ ಗಳಗನಾಥ ದೇವಸ್ಥಾನ, ಗಳಗನಾಥ, ಹಾವೇರಿ ತಾಲ್ಲೂಕು
8. ಶ್ರೀ ಸೋಮೇಶ್ವರ, ಶ್ರೀ ತುಳುವೇಶ್ವರ ದೇವಸ್ಥಾನ, ಹರಲಹಳ್ಳಿ, ಹಾವೇರಿ ತಾಲ್ಲೂಕು

9. ಶ್ರೀ ಸಿದ್ಧೇಶ್ವರ, ಶ್ರೀ ನರಸಿಂಹ, ಶ್ರೀ ಅಂಜನೇಯ, ಶ್ರೀ ಬಸವಣ್ಣ ದೇವಸ್ಥಾನಗಳು, ಹಾವೇರಿ, ಹಾವೇರಿ ತಾಲ್ಲೂಕು

10. ಶ್ರೀ ಸರ್ವೇಶ್ವರ ದೇವಸ್ಥಾನ, ನರೆಗಲ್, ಹಾವೇರಿ ತಾಲ್ಲೂಕು

11. ಶ್ರೀ ವೀರಭದ್ರ, ಶ್ರೀ ಮುಕ್ತೇಶ್ವರ, ಶ್ರೀ ಬಸವಣ್ಣ, ಶ್ರೀ ಹೊನ್ನಮ್ಮ ದೇವಸ್ಥಾನಗಳು, ಚೌಡಯ್ಯದಾನಪುರ, ರಾಣೆಬೆನ್ನೂರು ತಾಲ್ಲೂಕು

12. ಶ್ರೀ ರಾಮಲಿಂಗೇಶ್ವರ, ಶ್ರೀ ವೀರಭದ್ರ, ಶ್ರೀ ನಾರಾಯಣ ದೇವಸ್ಥಾನಗಳು, ಹಳೆ ಹೊನ್ನಟ್ಟಿ, ರಾಣೆಬೆನ್ನೂರು ತಾಲ್ಲೂಕು

13. ಶ್ರೀ ಮಾಲತೇಶ, ಶ್ರೀ ಮಲಸಂಬಾ ದೇವಸ್ಥಾನ, ದೇವರಗುಡ್ಡ, ರಾಣೆಬೆನ್ನೂರು ತಾಲ್ಲೂಕು

14. ಶ್ರೀ ನಗರೇಶ್ವರ ಅರವತ್ತು ಕಂಭದ ದೇವಸ್ಥಾನ, ಬಂಕಾಪುರ, ಶಿಗ್ಗಾವಿ ತಾಲ್ಲೂಕು

15. ಶ್ರೀ ಗಾಯತ್ರಿ ದೇವಸ್ಥಾನ, ತಪೋಭೂಮಿ, ತಡಾಸ ಕತ್ತರಿ, ಶಿಗ್ಗಾವಿ ತಾಲ್ಲೂಕು

# 17. ಬಳ್ಳಾರಿ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಬಳ್ಳಾರಿ ಜಿಲ್ಲೆಯು ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಬಳ್ಳಾರಿ ನಗರವು ಜಿಲ್ಲಾ ಕೇಂದ್ರವಾಗಿದೆ. ಬಳ್ಳಾರಿ ಜಿಲ್ಲೆಯು ಚಿತ್ರದುರ್ಗ, ದಾವಣಗೆರೆ, ಹಾವೇರಿ, ಗದಗ, ಕೊಪ್ಪಳ, ರಾಯಚೂರು ಜಿಲ್ಲೆಗಳಿಂದ ಮತ್ತು ತೆಲಂಗಾಣ ಗಳಿಂದ ಸುತ್ತುವರಿದಿದೆ. ಈ ಜಿಲ್ಲೆಯು ಬಳ್ಳಾರಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹರಪನಹಳ್ಳಿ, ಹೊಸಪೇಟೆ, ಕಂಪ್ಲಿ, ಕೊಟ್ಟೂರು, ಕೂಡ್ಲಿಗಿ, ಕುರುಗೋಡು, ಸಂಡೂರು, ಸಿರುಗುಪ್ಪಾ ಎಂಬ 11 ತಾಲ್ಲೂಕುಗಳನ್ನು ಹೊಂದಿದೆ.

ತುಂಗಭದ್ರಾ, ಹಗರಿ, ವೇದವತಿ ಜಿಲ್ಲೆಯ ಮುಖ್ಯ ನದಿಗಳು. ಗಣಿಗಾರಿಕೆಗೆ ಪ್ರಸಿದ್ಧಿಯಾದ ಜಿಲ್ಲೆ.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಹೂವಿನ ಹಡಗಲಿ

# BALLARI DISTRICT
## KARNATAKA







## LEGEND




- Metalled road
- National Highway
- Railway track
- Taluk boundary
- District headquarters
- Taluk headquarters
- Hilly area

## 3. ವಿರೂಪಾಕ್ಷ ದೇವಾಲಯ ಹಂಪಿ

ಸಾವಿರಾರು ವರ್ಷಗಳ ಇತಿಹಾಸವಿರುವ ಪಂಪಾಕ್ಷೇತ್ರ ಅಥವಾ ಇಂದಿನ ಹಂಪಿಯು ಈಗಿನ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿಗೆ ಸೇರಿದ ಸ್ಥಳ. ಹಂಪಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯೂ ಆಗಿತ್ತು,

ಪೌರಾಣಿಕ ಹಿನ್ನೆಲೆ - ಶಿವನಿಗೆ ವಿರೂಪ, ವಿಷಮಾಕ್ಷ, ವಿರೂಪಾಕ್ಷ ಎಂಬ ಹೆಸರುಗಳಿರುವುದಾಗಿ ಶಿವನ ಕುರಿತಾಗಿರುವ ಕೆಲವು ಸ್ತೋತ್ರಗಳಿಂದ ತಿಳಿದುಬರುತ್ತದೆ. ಆ ವಿರೂಪಾಕ್ಷನು ಹೇಮಕೂಟ ನಿವಾಸಿ.

ಹರಿಹರ ಕವಿಯ 'ಗಿರಿಜಾಕಲ್ಯಾಣ ಮಹಾಪ್ರಬಂಧಂ'ನ ಪ್ರಕಾರ - ಸತೀದೇವಿಯು ದಕ್ಷಯಜ್ಞದ ಸಂದರ್ಭದಲ್ಲಿ ಯೋಗಾಗ್ನಿಪ್ರವೇಶ ಮಾಡಿದ ನಂತರದ ದಿನಗಳಲ್ಲಿ ಶಿವನು ಕೈಲಾಸವನ್ನು ತೊರೆದು ಹೇಮಕೂಟಕ್ಕೆ ಬಂದು ಧ್ಯಾನದಲ್ಲಿ ಮಗ್ನನಾದನು.

ಮುಂದೆ, ಸತಿದೇವಿಯು ಹಿಮವಂತ-ಮೇನಾದೇವಿಯರ ಮಗಳಾಗಿ ಜನಿಸಿ, ಮಹರ್ಷಿ ನಾರದರ ನಿರ್ದೇಶದಂತೆ - ತಂದೆತಾಯಿಯರ ಅಪ್ಪಣೆ ಪಡೆದು - ಹೇಮಕೂಟ ಪರ್ವತಕ್ಕೆ ಬಂದು ಧ್ಯಾನಮಗ್ನನಾಗಿದ್ದ ಶಿವನ ಸೇವೆಯಲ್ಲಿ ತೊಡಗಿರುತ್ತಾಳೆ. ಶಿವನಾದರೋ ಒಮ್ಮೆಯೂ ಆಕೆಯನ್ನು ಕಣ್ತೆರೆದು ನೋಡಲೂ ಇಲ್ಲ.

ಇತ್ತ, ದುಷ್ಟ ತಾರಕಾಸುರನನ್ನು ವಧಿಸಲು ಶಿವತನಯನಿಗೆ ಮಾತ್ರ ಸಾಧ್ಯವಿರುವುದರಿಂದ ದೇವತೆಗಳೂ ಶಿವ-ಪಾರ್ವತಿಯರ ವಿವಾಹವು ಬೇಗ ನಡೆಯಲೆಂದು ಹಾರೈಸಿ, ಶಿವನ ತಪೋಭಂಗಕ್ಕಾಗಿ ಮನ್ಮಥನನ್ನು ಕಳುಹಿಸುತ್ತಾರೆ.

ಪಾರ್ವತಿಯ ಇನ್ನೊಂದು ಹೆಸರು ಪಂಪಾ ಎಂದು. ಆಕೆ ಹರನನ್ನು ಕುರಿತು ಈ ಕ್ಷೇತ್ರದಲ್ಲೇ ತಪಗೈದು, ಆತನನ್ನು ವರಿಸಿದಳೆಂಬುದು ಪುರಾಣದ ಕತೆ. ಮದುವೆಯ ನಂತರ ಶಿವಪಾರ್ವತಿಯರಿಬ್ಬರೂ ಈ ಕ್ಷೇತ್ರದಲ್ಲೇ ನೆಲೆಸಿದ್ದಾರೆಂದು ನಂಬಿಕೆ.

ಪೂರ್ವಕಾಲದಿಂದಲೂ ವಿರೂಪಾಕ್ಷ ದೇವಾಲಯವು ಪಂಪಾಪುರದ ಪ್ರಮುಖ ದೇವಾಲಯವಾಗಿದೆ. ದೇವಾಲಯ ನಿರ್ಮಾಣವಾದ ಕಾಲದ ಬಗ್ಗೆ ಸ್ಪಷ್ಟ ಅಭಿಪ್ರಾಯವಿಲ್ಲವಾದರೂ ಹಲವಾರು ಅರಸು ಮನೆತನದವರು ಕಾಲಕಾಲಕ್ಕೆ ಈ ಆಲಯದ ಜೀರ್ಣೋದ್ಧಾರ ಮಾಡಿಸಿರುವುದಾಗಿ ಶಾಸನಗಳಿಂದ3 ತಿಳಿದುಬರುತ್ತದೆ. ಹಾಗೂ ಇಲ್ಲಿನ ವಾಸ್ತು-ಶಿಲ್ಪಗಳನ್ನು ಕಂಡಾಗಲೂ ಈ ವಿಷಯ ಗೋಚರಿಸುತ್ತದೆ.

ಬೇರೆಬೇರೆ ದೇವತೆಗಳ ಸಣ್ಣಸಣ್ಣ ಗುಡಿಗಳಿರುವುದರಿಂದ ಈಗಿರುವ ವಿರೂಪಾಕ್ಷ ದೇವಾಲಯವು ಹಲವು ದೇವಾಲಯಗಳ ಸಂಕೀರ್ಣವೆಂದೂ ಹೇಳಬಹುದು.

ಹಂಪೆಯ ವಿರೂಪಾಕ್ಷ ದೇವಾಲಯವು ಗಾತ್ರ-ವಿಸ್ತಾರದಲ್ಲಿ ಅಗಾಧವಾಗಿರುವಂತೆಯೇ ಅದರ ಸೌಂದರ್ಯವೂ ಕೂಡ ಅನುಪಮವಾಗಿದೆ. ಆಲಯದ ಮಹಾದ್ವಾರದ ಮೇಲೆ ಒಂಬತ್ತು ಅಂತಸ್ತುಗಳ ಎತ್ತರವಾದ ಗೋಪುರವಿದೆ. ಗೋಪುರದ ಮೇಲೆ ಶಿವ, ವಿಷ್ಣು, ಗಣಪತಿ ಮೊದಲಾದ ದೇವದೇವಿಯರ ಮೂರ್ತಿಗಳೂ, ಸ್ತ್ರೀ-ಪುರುಷರ ವಿವಿಧ ಭಂಗಿಗಳ ಮೂರ್ತಿಗಳೂ, ಬೇಟೆ ಮೊದಲಾದ ಕ್ರೀಡೆಗಳನ್ನು ತೋರುವ ಮೂರ್ತಿಗಳೂ ಇವೆ.

ಗೋಪುರವನ್ನು ದಾಟಿ ಒಳಬಂದ ತಕ್ಷಣ ಮೂರು ಮುಖದ ವೃಷಭನ ಮೂರ್ತಿಯೊಂದು ಕಾಣಿಸುತ್ತದೆ. ಇದರ ಎದುರುಗಡೆಯ ಗೋಡೆಯ ಮೇಲೆ ವಿಜಯನಗರದ ರಾಯರ ರಾಜಲಾಂಛನವು ಕಾಣಬರುತ್ತದೆ. ಇದಕ್ಕೆ ಸ್ವಲ್ಪ ಸಮೀಪದಲ್ಲೇ ನಾಟ್ಯದಲ್ಲಿ ತೊಡಗಿರುವ ದುರ್ಗಾದೇವಿಯ ಶಿಲ್ಪವೊಂದನ್ನು ಕಾಣಬಹುದು. ಅದರ ಎಡಬದಿಗೆ ವಿವಿಧ ಶಿಲ್ಪಗಳ ಕೆತ್ತನೆಯಿಂದ ಕೂಡಿದ ಕಂಭಗಳಿರುವ ಮಂಟಪವೊಂದಿದೆ. ಶಿವಲಿಂಗ, ಬಸವ, ಶಿವಶರಣರ, ಗಣಪ್ರಮುಖರ ಶಿಲ್ಪಗಳನ್ನೂ, ರಾಮ-ಹನುಮಂತರ ಶಿಲ್ಪಗಳನ್ನೂ ಈ ಮಂಟಪದಲ್ಲಿ ಕಾಣಬಹುದು. ಎರಡನೇ ದ್ವಾರವನ್ನು ದಾಟಿ ಒಳಬಂದರೆ ದೊಡ್ಡ ಮಂಟಪವೊಂದು ಕಾಣುತ್ತದೆ. ಮಂಟಪದ ಶಿರೋಭಾಗದಲ್ಲಿರುವ ಮೂರ್ತಿಗಳ ಪೈಕಿ ಶಿವ-ಪಾರ್ವತಿಯರ ವಿವಾಹ ಸಂದರ್ಭದ ಮೂರ್ತಿಯು ಬಹುಸುಂದರವಾಗಿದೆ. ಈ ಮಂಟಪಕ್ಕೆ ಹೊಂದಿಕೊಂಡಂತೆಯೇ ಗರ್ಭಗುಡಿಯಿದೆ. ಗರ್ಭಗುಡಿಯಲ್ಲಿ ಪಂಪಾಪತಿಯಾದ ವಿರೂಪಾಕ್ಷಲಿಂಗವಿದೆ. ಮಂಟಪದಲ್ಲಿನ ಕಂಬಗಳ ಮೇಲೆಯೂ ಗರ್ಭಗುಡಿಯ ಹೊರಗೋಡೆಯ ಮೇಲೆಯೂ ಶಿವಶರಣರ ಶಿಲ್ಪಗಳನ್ನೂ, ಶಿವಲೀಲೆಗಳನ್ನು ನಿರೂಪಿಸುವ ಶಿಲ್ಪಗಳಿರುವುದನ್ನೂ ಗಮನಿಸಬಹುದು.

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಹಂಪಿ ಪುರವರಾಧೀಶ್ವರ ಶ್ರೀ ಪಂಪಾ ದೇವೀ ಸಮೇತ ಶ್ರೀ ವಿರೂಪಾಕ್ಷ ಸ್ವಾಮೀ ಪರಬ್ರಹ್ಮಣೇ ನಮಃ ||

ಪ್ರಣಾಮ ಸ್ತೋತ್ರ - ವಿರೂಪಾಕ್ಷ ವಿಶ್ವೇಶ ವಿಶ್ವಾದಿದೇವ | ತ್ರಯೀಮೂಲ ಶಮ್ಭೋ ಶಿವ ತ್ರ್ಯಮ್ಬಕ ತ್ವಂ | ಪ್ರಸೀದ ಸ್ಮರ ತ್ರಾಹಿ ಪಶ್ಯಾವಮುಕ್ತ್ಯೈ | ಕ್ಷಮಾಂ ಪ್ರಾಪ್ನುಹಿ ತ್ರ್ಯಕ್ಷ ಮಾಂ ರಕ್ಷ ಮೋದಾತ್ ||

ವಿರೂಪಾಕ್ಷ ದೇವಾಲಯವು ಹಲವು ದೇವಾಲಯಗಳನ್ನೊಳಗೊಂಡ ಸಂಕೀರ್ಣವೇ ಆಗಿದೆ. ವಿರೂಪಾಕ್ಷಲಿಂಗದ ಗರ್ಭಗುಡಿಯ ಹಿಂಭಾಗದಲ್ಲಿ (ಎಡಗಡೆಗೆ) ಪಂಪಾದೇವಿಯ, ಭುವನೇಶ್ವರಿಯ ಆಲಯಗಳು ಪಕ್ಕಪಕ್ಕದಲ್ಲೇ ಇವೆ. ಅಲ್ಲಿಯೇ ಸಮೀಪದಲ್ಲಿ ಗುಲಗಂಜಿ ಮಾಧವನ ಆಲಯವೂ ಇದೆ. ಈ ಆಲಯವು ನೆಲಮಟ್ಟಕ್ಕಿಂತ ಸ್ವಲ್ಪ ತಗ್ಗಿನಲ್ಲಿರುವುದರಿಂದ ಮೆಟ್ಟಿಲುಗಳನ್ನಿಳಿದು ಹೋಗಬೇಕಿದೆ. ವಿಷ್ಣು ಹಾಗೂ ಶಿವಲಿಂಗವು ಈ ಆಲಯದಲ್ಲಿರುವುದು ವಿಶೇಷ. ಉಳಿದಂತೆ, ಆಲಯಗಳ ಸಂಕೀರ್ಣದಲ್ಲಿರುವ ಗುಡಿಗಳ ಪೈಕಿ ವಿದ್ಯಾರಣ್ಯರ ಆಲಯವನ್ನೂ, ಸುದರ್ಶನ ಮೂರ್ತಿಯನ್ನೂ, ತಾರಕೇಶ್ವರ, ರತ್ನಗರ್ಭ ಗಣಪತಿಯ ಗುಡಿಗಳನ್ನೂ ಇಲ್ಲಿ ಹೆಸರಿಸಬಹುದು.

ಆಲಯದ ಹಿಂಭಾಗದಲ್ಲೊಂದು ವಿಶೇಷ ದೃಶ್ಯವನ್ನು ಕಾಣಬಹುದು. ಆಲಯದ ಹಿಂಭಾಗದಲ್ಲಿರುವ ಕತ್ತಲೆಕೋಣೆಯೊಂದರಲ್ಲಿ ಸಣ್ಣ ಕಿಂಡಿಯೊಂದಿದೆ. ಅದರಿಂದ ಒಳಬರುವ ಬೆಳಕು ಆ ಕಿಂಡಿಯೆದುರಿನ ಗೋಡೆಯ ಮೇಲೆ ಬೀಳುತ್ತದೆ. ಇಲ್ಲಿ ಆಲಯದ ಮುಖ್ಯಗೋಪುರದ ಛಾಯೆಯು ತಲೆಕೆಳಗಾಗಿ ಕಾಣುತ್ತದೆ. ಬೆಳಗಿನ ಹೊತ್ತು ಈ ಛಾಯೆಯು ಬರಿಯ ಕಪ್ಪು ನೆರಳಿನಂತೆ ಕಂಡುಬಂದರೆ ಸಂಜೆಯ ಹೊತ್ತಿಗೆ ಸಹಜವರ್ಣದ ಬಿಂಬವೇ ತಲೆಕೆಳಗಾಗಿ ಕಾಣುತ್ತದೆ. ನೂರಾರು ವರ್ಷಗಳ ಹಿಂದೆಯೇ ಇಂತಹ ತಂತ್ರವನ್ನು ಅಳವಡಿಸಿರುವುದು ವಿಜಯನಗರದ ವಾಸ್ತುಶಿಲ್ಪಿಗಳ ಅದ್ಭುತ ಪ್ರತಿಭೆಗೆ ಸಾಕ್ಷಿಯಾಗಿದೆ.

ರಂಗಮಂಟಪದ ಎಡಗಡೆಯಿರುವ ದ್ವಾರವನ್ನು ದಾಟಿ ಹೋದರೆ ಶಿಥಿಲವಾಗಿರುವ ಕೆಲವು ಗುಡಿಗಳೂ, ಮನ್ಮಥಕುಂಡವೂ, ಮಹಿಷಮರ್ದಿನಿ ಆಲಯವೂ ಕಾಣಿಸುತ್ತದೆ. ಇದ್ದುದರಲ್ಲಿ ಮಹಿಷಮರ್ದಿನಿ ದೇವಾಲಯವು ಒಳ್ಳೆಯ ಸ್ಥಿತಿಯಲ್ಲಿದ್ದು ಈಗಲೂ ಅಲ್ಲಿ ಪ್ರತಿದಿನದ ಪೂಜಾಕಾರ್ಯಗಳು ನಡೆಯುತ್ತವೆ.

ವಿರೂಪಾಕ್ಷ ದೇವಾಲಯದ ಎದುರು ಸುಮಾರು ಒಂದು ಕಿಲೋಮೀಟರ್ ದೂರದವರೆಗೂ ಇರುವ ವಿಶಾಲ ರಸ್ತೆಯ ಎರಡೂ ಬದಿಯಲ್ಲಿ ನಿಂತಿರುವ ಸಾಲುಸಾಲು ಕಲ್ಲುಮಂಟಪಗಳನ್ನು ನೋಡಬಹುದು. ಈ ಬೀದಿಯನ್ನೇ ಇಲ್ಲಿನ ಬಜಾರು ಬೀದಿ ಅಥವಾ ರಥಬೀದಿ ಎಂದು ಕರೆಯುತ್ತಾರೆ. ವಿಜಯನಗರದ ಕಾಲದಲ್ಲಿ ಇದೊಂದು ಪ್ರಮುಖ ಮಾರುಕಟ್ಟೆಯಾಗಿದ್ದಂತೆ ತಿಳಿದುಬರುತ್ತದೆ.

ಹಂಪಿಯಲ್ಲಿ ಇನ್ನೂ ಅನೇಕ ವೈಶಿಷ್ಟ್ಯ ಗಳನ್ನು ನೋಡಬಹುದು. ಪ್ರತಿವರ್ಷ ಹಂಪಿ ಉತ್ಸವ ನಡೆಯುತ್ತದೆ. ಊಟ, ವಸತಿ, ಕುಡಿಯುವ ನೀರು, ಸ್ವಚ್ಛತೆ, ವಾಹನ ನಿಲುಗಡೆ, ಪಾದರಕ್ಷೆ ನಿಲುಗಡೆ, ರಕ್ಷಣೆ, ಭದ್ರತೆ, ತುರ್ತು ಚಿಕಿತ್ಸೆ, ಮತ್ತು ಇತರ ಸೌಲಭ್ಯಗಳನ್ನು ಒಳಗೊಂಡಿದೆ.

## 4. ಬಳ್ಳಾರಿ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ವಿಜಯ ವಿಠ್ಠಲ ದೇವಾಲಯಗಳ ಗುಂಪು, ಹಂಪಿ, ಹೊಸಪೇಟೆ ತಾಲ್ಲೂಕು
2. ಶ್ರೀ ರಂಗನಾಥ ದೇವಸ್ಥಾನ, ಹೊಳಲು, ಹೂವಿನಹಡಗಲಿ ತಾಲ್ಲೂಕು
3. ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ಕುರುವತ್ತಿ, ಹೂವಿನಹಡಗಲಿ ತಾಲ್ಲೂಕು
4. ಶ್ರೀ ಮೈಲಾರಲಿಂಗ ದೇವಸ್ಥಾನ, ಮೈಲಾರ, ಹೂವಿನಹಡಗಲಿ ತಾಲ್ಲೂಕು
5. ಶ್ರೀ ಕುಮಾರಸ್ವಾಮಿ ದೇವಸ್ಥಾನ, ಕುಮಾರಸ್ವಾಮಿ ಗುಡ್ಡ, ಸಂಡೂರು ತಾಲ್ಲೂಕು

# 18. ಕೊಪ್ಪಳ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಕೊಪ್ಪಳ ಜಿಲ್ಲೆಯು ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಬಳ್ಳಾರಿ ನಗರವು ಜಿಲ್ಲಾ ಕೇಂದ್ರವಾಗಿದೆ. ಬಳ್ಳಾರಿ ಜಿಲ್ಲೆಯು ಬಳ್ಳಾರಿ, ಗದಗ, ಬಾಗಲಕೋಟೆ, ರಾಯಚೂರು ಜಿಲ್ಲೆಗಳಿಂದ ಮತ್ತು ತೆಲಂಗಾಣ ಗಳಿಂದ ಸುತ್ತುವರಿದಿದೆ. ಈ ಜಿಲ್ಲೆಯು ಗಂಗಾವತಿ, ಕನಕಗಿರಿ, ಕಾರಟಗಿ, ಕೊಪ್ಪಳ, ಕುಕನೂರು, ಕುಷ್ಟಗಿ, ಯಲಬುರ್ಗ ಎಂಬ 7 ತಾಲ್ಲೂಕುಗಳನ್ನು ಹೊಂದಿದೆ.

ತುಂಗಭದ್ರಾ

# KOPPALA DISTRICT
## KARNATAKA










**LEGEND**

Metalled road
National Highway
Railway track
Taluk boundary
District headquarters
Taluk headquarters

## 1. ಆನೆಗುಂದಿ ದೇವಾಲಯಗಳು ಹಂಪಿ

ಆನೆಗುಂದಿ ಕರ್ನಾಟಕ ರಾಜ್ಯಕ್ಕೆ ಸೇರಿದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿ ಹೊಸಪೇಟೆಯಿಂದ ಸುಮಾರು 16 ಕಿ.ಮೀ.ಗಳ ಮೇಲಿನ ತುಂಗಭದ್ರಾ ನದಿಯ ದಂಡೆಯಲ್ಲಿನ ಚಿಕ್ಕದೊಂದು ಗ್ರಾಮ. ತುಂಗಭದ್ರಾ ನದಿಯ ತಟದಲ್ಲಿರುವ ಕಲ್ಲು, ಗುಡ್ಡಗಳ ಪ್ರದೇಶಗಳ ನಡುವೆ ಇರುವ ಆನೆಗುಂದಿ ಎಂಬ ಪುಟ್ಟ ಗ್ರಾಮದ ಬಳಿ ಅಲ್ಲಲ್ಲಿ ಕಾಣಸಿಗುವ ಹಲವಾರು ಸ್ಮಾರಕಗಳು, ರಾಮಾಯಣ ಸೇರಿದಂತೆ ವಿಜಯನಗರ ಸಾಮ್ರಾಜ್ಯದ ಗತವೈಭವಕ್ಕೆ ಸಾಕ್ಷಿಯಾಗಿವೆ. ಇದು ರಾಮಾಯಣ ಕಾಲದಲ್ಲಿ ಕಿಷ್ಕಿಂಧವೆಂಬ ಹೆಸರಿನಿಂದ ಕಪಿರಾಜರಾದ ವಾಲಿ, ಸುಗ್ರೀವರ ರಾಜಧಾನಿಯಾಗಿತ್ತು ಎಂದು ಪ್ರತೀತಿ. ಶಬರಿಗೆ ಶ್ರೀ ರಾಮನ ದರ್ಶನ ಆಗಿದ್ದು ಇಲ್ಲಿಯೇ. ಪರ್ವತಾವಳಿಯ ಪರಿಸರದಲ್ಲಿ ನಿಸರ್ಗದ ರಕ್ಷಣೆಯಿರುವುದರಿಂದ ಸ್ವಾಭಾವಿಕ ದುರ್ಗವಾಗಿದೆ. ಯಾದವ - ಹೊಯ್ಸಳರ ಕಾಲದಲ್ಲಿ ಬೇಡರು ಅಥವಾ ವಾಲ್ಮೀಕಿ ನಾಯಕ ಸಮುದಾಯದ ಚಿಕ್ಕ ಪಾಳೆಯಗಾರರು ರಾಜ್ಯವನ್ನಾಳುತ್ತಿದ್ದರು.

ಆನೆಗುಂದಿ ಗ್ರಾಮದಲ್ಲಿ ಶ್ರೀರಂಗನಾಥ ಸ್ವಾಮಿಯ ವಿಶಾಲ ದೇವಾಲಯ, ಗಗನ ಮಹಲ್ ಇವೆ. ಆನೆಗುಂದಿ ಗ್ರಾಮದ ಪಕ್ಕದಲ್ಲಿಯೇ ಇರುವ ಬೃಹತ್ ಪರ್ವತದಲ್ಲಿ ಶ್ರೀ ದುರ್ಗಾ ದೇವಿಯ ದೇವಸ್ಥಾನವಿದ್ದು, ಹಬ್ಬ, ಹರಿದಿನಗಳಲ್ಲಿ, ಅಮಾವಸ್ಯೆ, ಹುಣ್ಣಿಮೆಯ ದಿನಗಳಂದು, ಇಲ್ಲಿಗೆ ಆಗಮಿಸುವ ಭಕ್ತರ ಸಂಖ್ಯೆ ಅಧಿಕ. ಐತಿಹಾಸಿಕ ಪ್ರಾಮುಖ್ಯತೆ ಹೊಂದಿರುವ ಹಾಗೂ ಆಕರ್ಷಕವಾಗಿರುವ ಆನೆಗುಂದಿ ಕೋಟೆಯ ಮಹಾದ್ವಾರ ಇಲ್ಲಿಯೇ ಸಮೀಪದಲ್ಲಿದೆ. ಇದು ಪ್ರವಾಸಿಗರ ಆಕರ್ಷಣೀಯ ಕೇಂದ್ರವೂ ಕೂಡ ಆಗಿದೆ. ಇಲ್ಲಿಂದ ಸ್ವಲ್ಪ ದೂರ ಕ್ರಮಿಸಿದರೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಆನೆಗಳನ್ನು ಕಟ್ಟಿ ಹಾಕುತ್ತಿದ್ದ ಆನೆಲಾಯ ಮತ್ತು ಕುದುರೆಲಾಯಗಳನ್ನು ವೀಕ್ಷಿಸಬಹುದಾಗಿದೆ.

ಆನೆಗುಂದಿಯಿಂದ ಸಾಣಾಪುರ ಮಾರ್ಗದಲ್ಲಿ ಸ್ವಲ್ಪ ಒಳಮಾರ್ಗದಲ್ಲಿ ತೆರಳಿದರೆ ಪ್ರಸಿದ್ಧ ಪಂಪಾ ಸರೋವರ ನೋಡಬಹುದು. ದೇಶದಲ್ಲಿನ ಅತ್ಯಂತ ಪವಿತ್ರ ಪಂಚಸರೋವರಗಳ ಪೈಕಿ ಇಲ್ಲಿನ ಪಂಪಾ ಸರೋವರ ತನ್ನದೇ ಆದ ಪ್ರಾಮುಖ್ಯತೆ ಪಡೆದಿದೆ. ಉಳಿದ ನಾಲ್ಕು ಮಾನಸ ಸರೋವರ, ಬಿಂದು ಸರೋವರ, ನಾರಾಯಣ ಸರೋವರ, ಮತ್ತು ಪುಷ್ಕರ್ ಸರೋವರಗಳಾಗಿವೆ. ಇದು ಅತ್ಯಂತ ಆಕರ್ಷಕವಾಗಿದ್ದು, ಸರೋವರದ ತಟದಲ್ಲಿರುವ ಶ್ರೀ ಜಯಲಕ್ಷ್ಮೀ ದೇವಸ್ಥಾನ ಹಾಗೂ ಶಬರಿ ಗುಹೆ ಮುಂತಾದ ಪ್ರಸಿದ್ಧ ತಾಣಗಳಿವೆ.

ಅಂಜನಾದ್ರಿ ಪರ್ವತ - 575 ಮೆಟ್ಟಿಲುಗಳನ್ನು ಹತ್ತಿದ ನಂತರ ಇಲ್ಲಿ ಈ ಬೆಟ್ಟದ ಮೇಲೆ ಆಂಜನೇಯನ ದೇವಸ್ಥಾನವಿದೆ. ಕಲ್ಲು ಬಂಡೆಗಳ ತುದಿಯಲ್ಲಿ ಈ ದೇವಸ್ಥಾನವಿದ್ದು ಇಲ್ಲಿ ಅಂಜನೇಯನ ಕಲ್ಲಿನ ವಿಗ್ರಹವನ್ನು ಇರಿಸಲಾಗಿದೆ. ಹಾಗೆ ಇಲ್ಲಿ ನೀರಿನ ಮೇಲೆ ತೇಲುವ ಕಲ್ಲು ಸಹ ಕಾಣಸಿಗುತ್ತದೆ. ಈ ಕಲ್ಲಿನ ಮೇಲೆ 'ಶ್ರೀರಾಮ' ಎಂದು ಬರೆದಿರುವುದು ನಾವು ನೋಡಬಹುದು. ಈ ದೇವಸ್ಥಾನದಲ್ಲಿ ಮಧ್ಯಾಹ್ನ ಭಕ್ತಾದಿಗಳಿಗಾಗಿ ಪ್ರಸಾದವಾಗಿ ಭೋಜನದ ವ್ಯವಸ್ಥೆಯನ್ನು ಮಾಡಲಾಗಿದೆ. ಈ ಪ್ರದೇಶವು ಹಂಪಿಯ ಭಾಗವಾಗಿದೆ. ಇಲ್ಲಿನಿಂದ ಸುತ್ತಮುತ್ತಲಿನ ಹಂಪಿಯ ಬೇರೆ ಪ್ರದೇಶಗಳನ್ನು ಕಾಣಬಹುದು. ಇಲ್ಲಿನ ಶೇಷಶಾಯಿ ಗುಹಾಂತರ ವಿಷ್ಣುವಿಗ್ರಹ ಪ್ರಸಿದ್ಧವಿದೆ.

ಆನೆಗುಂದಿಗೆ ಆಗಮಿಸಿದ ಪ್ರವಾಸಿಗರು ನೋಡಲೇ ಬೇಕಾದ ಪ್ರಮುಖ ಧಾರ್ಮಿಕ ಕ್ಷೇತ್ರವೆಂದರೆ ಮಾಧ್ವಯತಿಗಳ ಒಂಬತ್ತು ವೃಂದಾವನಗಳಿರುವ "ನವ ವೃಂದಾವನ".

## 2. ಕೊಪ್ಪಳ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಕನಕಚಲಪತಿ ದೇವಸ್ಥಾನ, ಕನಕಗಿರಿ, ಕೊಪ್ಪಳ ತಾಲ್ಲೂಕು
2. ಶ್ರೀ ಸೋಮೇಶ್ವರ ಕೋಟಿ ಲಿಂಗ ದೇವಸ್ಥಾನ, ಪುರ, ಕುಷ್ಟಗಿ ತಾಲ್ಲೂಕು
3. ಶ್ರೀ ಮಹಾದೇವ ದೇವಸ್ಥಾನ ಇಟಗಿ ಯೆಲಬುರ್ಗಾ ತಾಲ್ಲೂಕು
4. ಶ್ರೀ ಕಲ್ಲೇಶ್ವರ ಮತ್ತು ಶ್ರೀ ಮಲ್ಲಿಕರ್ಜುನ ದೇವಾಲಯಗಳು, ಕುಕನೂರು, ಯೆಲಬುರ್ಗಾ ತಾಲ್ಲೂಕು

# 19. ರಾಯಚೂರು ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ರಾಯಚೂರು ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಈ ಜಿಲ್ಲೆಯನ್ನು ಯಾದಗಿರಿ, ವಿಜಯಪುರ, ಬಾಗಲಕೋಟೆ ಮತ್ತು ತೆಲಂಗಾಣಗಳು ಸುತ್ತುವರಿದಿವೆ. ರಾಯಚೂರು ಪಟ್ಟಣವು ಜಿಲ್ಲೆಯ ಕೇಂದ್ರ ಸ್ಥಾನ. ಈ ಜಿಲ್ಲೆಯು ದೇವದುರ್ಗ, ಲಿಂಗುಸೂಗುರ, ಮಾನ್ವಿ, ಮಸ್ಕಿ, ರಾಯಚೂರು, ಸಿಂಧನೂರು, ಸಿರವಾರ ಎಂಬ 7 ತಾಲ್ಲೂಕುಗಳನ್ನು ಹೊಂದಿದೆ.

ದಕ್ಷಿಣದಲ್ಲಿ ತುಂಗಭದ್ರಾ ನದಿ ಹಾಗೂ ಉತ್ತರದಲ್ಲಿ ಕೃಷ್ಣಾ ನದಿಯು ಹರಿಯುತ್ತಿವೆ.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ರಾಯಚೂರು


RAICHURU DISTRICT
KARNTAKA
N
GULBARGA DISTRICT
DEODRUG
BIJAPUR DISTRICT
LINGSUGUR
RAICHUR
ANDHRA PRADESH STATE
BAGALKOT DISTRICT
MANVI
SINDHNUR
KOPPAL DISTRICT
BELLARY DISTRICT
LEGEND
KEY MAP
Metalled road
Railway track
Taluk boundary
District headquarters
Taluk headquarters

## 1. ರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ,

ಮಂತ್ರಾಲಯವು ಆಂಧ್ರ ಪ್ರದೇಶದಲ್ಲಿ ಕರ್ನೂಲು ಜಿಲ್ಲೆಯ ಆದವಾನಿ ತಾಲ್ಲೂಕಿನ ಒಂದು ಊರು. ರಾಯಚೂರು ಪಟ್ಟಣದಿಂದ 40 ಕಿಮೀ ದೂರದಲ್ಲಿ ತುಂಗಭದ್ರಾ ನದಿಯ ದಂಡೆಯಲ್ಲಿದೆ. ಶ್ರೀ ರಾಘವೇಂದ್ರ ಸ್ವಾಮಿಯವರ ನೆಲೆವೀಡಾಗಿದ್ದರಿಂದ ಪ್ರಖ್ಯಾತಿಗೊಂಡ ಸ್ಥಳ. ಮಧ್ವಮತ ಸಂಪ್ರದಾಯವನ್ನು ಅವಲಂಬಿಸಿದ ರಾಘವೇಂದ್ರ ಗುರುಸಾರ್ವಭೌಮರು ಸಶರೀರರಾಗಿ ಇಲ್ಲಿ ಬೃಂದಾವನಸ್ಥರಾದರು. ಅವರು ಸ್ಥಾಪಿಸಿದ ಮಠ ಮತ್ತು ಗುರುಪರಂಪರೆ ಇಂದಿಗೂ ಮುಂದುವರಿದಿದೆ. ಮಾಧ್ವ ತತ್ವಶಾಸ್ತ್ರದ ಪ್ರಮುಖ ಮಠಗಳಲ್ಲಿ ಉಡುಪಿ ಅಷ್ಟ ಮಠಗಳು, ಶ್ರೀ ರಾಘವೇಂದ್ರ ಸ್ವಾಮಿ ಮಠ, ಶ್ರೀ ಶ್ರೀಪಾದರಾಜ ಮಠ, ಶ್ರೀ ವ್ಯಾಸರಾಯ ಮಠ, ಶ್ರೀ ಉತ್ತರಾದಿ ಮಠಗಳು ಸೇರುತ್ತವೆ.

ಕಲಿಯುಗ ಕಾಮಧೇನು ಮತ್ತು ಕಲ್ಪತರು ಎಂದು ಕರೆಯಲ್ಪಡುವ ಶ್ರೀ ರಾಘವೇಂದ್ರ ತೀರ್ಥರ ಪೂಜಾರಾಧನೆಯೊಂದಿಗೆ ಇಲ್ಲಿಯ ಮಠಾಧಿಪತಿಗಳು, ಶ್ರೀ ಮೂಲರಾಮ, ಶ್ರೀ ದಿಗ್ವಿಜಯ ರಾಮ, ಶ್ರೀ ಜಯರಾಮ ವಿಗ್ರಹಗಳನ್ನು ಪೂಜಿಸುತ್ತಾರೆ. ಮಠದ ಹೊರಗಡೆ ಎಡಭಾಗದಲ್ಲಿ ಮಂಚಾಲಾಂಬಿಕೆಯ ದೇವಸ್ಥಾನವಿದೆ.

ದರ್ಶನ ಸಮಯ - ಬೆಳಿಗ್ಗೆ 6.00 AM to 2.00 PM, ಸಂಜೆ 4.00 PM to 9.00 PM, ಮಂತ್ರಾಕ್ಷತೆಯ ಸಮಯ - ಬೆಳಿಗ್ಗೆ 10.00 ರಿಂದ 11.30 ಮತ್ತು ಸಂಜೆ 6.30 to 8.30

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಮಂತ್ರಾಲಯ ಪುರವಾಸೀ ಗುರುಸಾರ್ವಭೌಮ ಶ್ರೀ
ರಾಘವೇಂದ್ರ ಸ್ವಾಮೀ ಚರಣಾರವಿಂದಾಭ್ಯಾಂ ನಮಃ ||

ಪ್ರಣಾಮ ಸ್ತೋತ್ರ - ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮ ರತಾಯ ಚ |
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ||

ಮಂತ್ರಾಲಯ ಯಾತ್ರಾವಿಧಿ - ತುಂಗಭದ್ರಾನದಿಯಲ್ಲಿ ಪವಿತ್ರ ಸ್ನಾನ, ಮಾಂಚಾಲಮ್ಮ ದೇವೀ ದರ್ಶನ, ಬೃಂದಾವನದ ಕನಿಷ್ಠ 28 ಪ್ರದಕ್ಷಿಣೆ ಆಮೇಲೆ ದರ್ಶನ, ನಿಮಗಿಷ್ಟವಾದ ಸೇವೆಯನ್ನು ಕೈಗೊಳ್ಳಿ, ಪಾದೋದಕ, ಹಸ್ತೋದಕ, ಸ್ವಾಮೀಜಿಯವರಿಂದ ಮಂತ್ರಾಕ್ಷತೆ ಸ್ವೀಕರಿಸಿ,

ಯಾತ್ರಿಕರ ಸೌಲಭ್ಯಗಳು - ಮಠವು ವಸತಿ ಮತ್ತು ಭೋಜನ ವ್ಯವಸ್ಥೆ ಕಲ್ಪಿಸಿದೆ. ವಾಹನನಿಲುಗಡೆ, ಶೌಚಾಲಯಗಳು, ವೈದ್ಯಕೀಯ ಸೌಲಭ್ಯ, ಪಾದರಕ್ಷೆ ನಿಲುಗಡೆ.

ಹವಾಮಾನ - ಫೆಬ್ರವರಿ ತಿಂಗಳಿನ ಅನಂತರ ಇಲ್ಲಿ ಬಲು ಬಿಸಿಲು, ಸೆಕೆ. ಇಲ್ಲಿಯ ಹೆಚ್ಚು ಪ್ರದೇಶ ಮರಳಿನಿಂದ ಕೂಡಿರುವುದರಿಂದ ಮರಳು ಕಾದು ತಿರುಗಾಡುವುದೇ ಕಷ್ಟವಾಗುತ್ತದೆ.

ದೇಶಾದ್ಯಂತ ರಾಯರ ಶಾಖಾ ಮಠಗಳು ಹರಡಿವೆ, ಸಂಸ್ಕೃತ ವಿದ್ಯಾಲಯ, ಗ್ರಂಥ ಭಂಡಾರ

## 2. ರಾಯಚೂರು ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ಪಂಚಮುಖಿ ಪ್ರಾಣ ದೇವರು ಹನುಮಂತ ದೇವಾಲಯ, ಗಾಂಧಾಲು ದೇವದುರ್ಗ ತಾಲ್ಲೂಕು
2. ಶ್ರೀ ಮಳೆ-ಶಂಕರ, ವೆಂಕಟೇಶ್ವರ, ಈಶ್ವರ, ಬಂಗಾರ ಬಸಪ್ಪ ಮತ್ತು ಹನುಮಂತ ದೇವಾಲಯಗಳು, ಗಬ್ಬುರು, ದೇವದುರ್ಗ ತಾಲ್ಲೂಕು
3. ಶ್ರೀ ಅಮರೇಶ್ವರ ದೇವಸ್ಥಾನ, ದೇವರ ಭೂಪುರ, ಲಿಂಗಸುಗುರು ತಾಲ್ಲೂಕು
4. ಶ್ರೀ ಮಹಾಲಕ್ಷ್ಮಿ ದೇವಸ್ತಾನ ಮತ್ತು ಶ್ರೀ ಮಾರ್ಕಂಡೇಶ್ವರ ಗುಡಿ, ಕಲ್ಲುರು, ಮಾನ್ವಿ ತಾಲ್ಲೂಕು
5. ಶ್ರೀ ಶ್ರೀಪಾದ ಶ್ರೀವಲ್ಲಭ ದೇವಸ್ಥಾನ, ಕುರುಗಡ್ಡೆ, ರಾಯಚೂರು ತಾಲ್ಲೂಕು
6. ಶ್ರೀ ಸುಗುರೇಶ್ವರ ದೇವಸ್ಥಾನ, ದೇವರ್ಸುಗುರು, ರಾಯಚೂರು ತಾಲ್ಲೂಕು
7. ಶ್ರೀ ನಾರದ ದೇವಸ್ಥಾನ, ನಾರದಗಡ್ಡೆ, ರಾಯಚೂರು ತಾಲ್ಲೂಕು
8. ಶ್ರೀ ತ್ರಯಂಬಕೇಶ್ವರ ದೇವಸ್ಥಾನ, ಕವಿತಾಳ, ರಾಯಚೂರು ತಾಲ್ಲೂಕು

# 20. ಕಲಬುರಗಿ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಕಲಬುರಗಿ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಈ ಜಿಲ್ಲೆಯನ್ನು ವಿಜಯಪುರ, ಸೋಲಾಪುರ, ರಂಗರೇಡ್ಡಿ, ಮೇಡಕ್, ಬಿದರ್, ಉಸ್ಮನಾಬಾದ್, ಯಾದಗಿರಿ ಜಿಲ್ಲೆಗಳು ಸುತ್ತುವರೆದಿವೆ. ಕಲಬುರಗಿ ನಗರವೇ ಜಿಲ್ಲಾಕೇಂದ್ರವು. ಜಿಲ್ಲೆಯಲ್ಲಿ ಅಫಜಲಪುರ, ಅಳಂದ, ಚಿಂಚೋಳಿ, ಚಿತ್ತಾಪುರ, ಕಲಬುರಗಿ, ಜೇವರ್ಗಿ ಮತ್ತು ಸೇಡಂ ಎಂಬ 7 ತಾಲ್ಲೂಕುಗಳಿವೆ.

ಕೃಷ್ಣಾ, ಭೀಮಾ, ಬೋರಿ, ಅಮರಜ, ಕಾಗಿಣಾ, ಬೆಣ್ಣೆ ತೊರೆ ಇವು ಪ್ರಮುಖ ನದಿಗಳು.

ಜೋಳದ ರೊಟ್ಟಿ, ಶೆಂಗಾ ಚಟ್ನಿ ಪುಡಿ, ಬೆಳೆ ಹುರಣ ಹೋಳಿಗೆ, ಇವು ಪ್ರಮುಖ ತಿಂಡಿಗಳು.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಕಲಬುರ್ಗಿ




## 1. ದತ್ತಾತ್ರೇಯ ದೇವಸ್ಥಾನ, ಗಾಣಗಾಪುರ

ದತ್ತಸಂಪ್ರದಾಯದ ಒಂದು ಪವಿತ್ರ ತೀರ್ಥಕ್ಷೇತ್ರವಾದ ಗಾಣಗಾಪುರವು ಕಲಬುರಗಿ ಜಿಲ್ಲೆಯ ಅಫ್ಜಲ್‌ಪುರ ತಾಲ್ಲೂಕಿನಲ್ಲಿ ಕಲಬುರಗಿ ನಗರದಿಂದ ಸುಮಾರು 50 ಕಿಮಿ ದೂರದಲ್ಲಿ ಭೀಮಾ- ಅಮರಜ ನದಿಗಳ ಸಂಗಮದ ಹತ್ತಿರ ಇದೆ. ದತ್ತಾವತಾರಿ

ಶ್ರೀನರಸಿಂಹ ಸರಸ್ವತಿಯವರು ಇಲ್ಲಿ ಸುಮಾರು 23 ವರ್ಷ ನೆಲೆಸಿದ್ದರು. ಈ ಮಠದಲ್ಲಿರುವ ಶ್ರೀಗುರುಗಳ ನಿರ್ಗುಣ ಪಾದುಕೆಗಳನ್ನು ಒಂದು ಬೆಳ್ಳಿಯ ಕಿಟಕಿಯ ಮೂಲಕ ನೋಡಬೇಕಾಗುತ್ತದೆ. ಮಠದ ಆವಾರದಲ್ಲಿ ಮಹಾದೇವ - ಪಾರ್ವತಿಯರ ಮೂರ್ತಿ, ಅಶ್ವತ್ಥವೃಕ್ಷದ ಪೊದರಿನಲ್ಲಿ ನಾಗನಾಥ ಮತ್ತು ಹನುಮಂತನ ಮೂರ್ತಿಗಳು ತುಲಸೀ ವೃಂದಾವನಗಳು ಸ್ಥಾಪಿತವಾಗಿವೆ.

ಮಠದಿಂದ ಸುಮಾರು 1.6 ಕಿಮೀ ದೂರದಲ್ಲಿ ಭೀಮಾ - ಅಮರಜ ನದಿಗಳ ಸಂಗಮ, ಭಸ್ಮದ ರಾಶಿ ಇದೆ. ಸಂಗಮೇಶ್ವರ ದೇವಾಲಯದ ಎದುರು ಶ್ರೀನರಸಿಂಹ ಸರಸತ್ವಿಯವರ ತಪೋಭೂಮಿ ಇದೆ. ಸಂಗಮದಿಂದ ಊರಿಗೆ ಬರುವ ದಾರಿಯಲ್ಲಿ ಷಟ್ಕುಲತೀರ್ಥ, ನರಸಿಂಹತೀರ್ಥ, ಭಾಗೀರಥೀತೀರ್ಥ, ಪಾಪವಿನಾಶಿತೀರ್ಥ, ಕೋಟಿತೀರ್ಥ, ರುದ್ರಪಾದತೀರ್ಥ, ಚಕ್ರತೀರ್ಥ ಮತ್ತು ಮನ್ಮಥತೀರ್ಥ ಎಂಬ ಎಂಟು ತೀರ್ಥಗಳಿವೆ. ಇಲ್ಲಿನ ತೀರ್ಥಗಳಲ್ಲಿ ಸ್ನಾನಮಾಡಿ ಭಸ್ಮಲೇಪಿಸಿದರೆ ಅನೇಕ ಫಲಗಳು ಪ್ರಾಪ್ತಿಯಾಗುತ್ತವೆ.

ಶ್ರೀಗುರುಚರಿತ್ರೆ ಪಾರಾಯಣಮಾಡಿ ಭಿಕ್ಷಾನ್ನ ಜೀವನವನ್ನು ನಡೆಸುವುದು ಇಲ್ಲಿಯ ವಿಶೇಷ. ದತ್ತವ್ರತದ ಪ್ರಕಾರ ಪ್ರತಿಯೊಬ್ಬ ಯಾತ್ರಿಕನೂ ಕನಿಷ್ಠಪಕ್ಷ ಐದು ಮನೆಗಳಿಗಾದರೂ ಹೋಗಿ ಬೇಡಬೇಕು ಎಂಬುದು ನಿಯಮ. ಇದನ್ನು ಮಧುಕರಿ ಎನ್ನುತ್ತಾರೆ. ಧನಿಕರಾದ ದತ್ತಭಕ್ತರು ಸೇವಾಕರ್ತರಿಗೆ ಮಧುಕರಿ, ಧನಧಾನ್ಯ ಸಹಾಯ, ವಿಪ್ರರಿಂದ ಶ್ರೀಗುರುಚರಿತ್ರೆ ಪಾರಾಯಣ ಮಾಡಿಸಲೂ ಬಹುದು. ಈಗ ಸುಮಾರು 500 ವರ್ಷಗಳಿಂದ ಈ ಸಂಪ್ರಾದಾಯ ಅನೂಚಾನವಾಗಿ ನಡೆದುಬರುತ್ತಿದೆ.

ದರ್ಶನ ಸಮಯ - ಬೆಳಿಗ್ಗೆ 7:00 ರಿಂದ 11:30, ಮಧ್ಯಾಹ್ನ 12:30 ರಿಂದ 2:00, ಹಾಗೂ 2:30 ರಿಂದ ಸಂಜೆ 7:30

ಪ್ರಣಾಮ ಮಂತ್ರ - ಶ್ರೀ ಕ್ಷೇತ್ರ ಗಾಣಗಾಪುರವಾಸೀ ಗುರುದತ್ತಾತ್ರೇಯ ಸ್ವರೂಪಿ ಶ್ರೀ ನರಸಿಂಹ ಸರಸ್ವತೀ ಸ್ವಾಮೀ ಚರಣಾರವಿಂದಾಭ್ಯಾಂ ನಮಃ ||

ಪ್ರಣಾಮ ಸ್ತೋತ್ರ - ಜಟಾಧರಂ ಪಾಂಡುರಂಗಂ ಶೂಲಹಸ್ತಂ ಕೃಪಾನಿಧಿಮ್ ।
ಸರ್ವರೋಗಹರಂ ದೇವಂ ದತ್ತಾತ್ರೇಯಮಹಂ ಭಜೇ ॥

ಉತ್ಸವಗಳು - ಶ್ರೀದತ್ತಜಯಂತಿ ಉತ್ಸವ, ಶ್ರೀನರಸಿಂಹ ಸರಸ್ವತಿಯವರ ಪುಣ್ಯತಿಥಿ ಉತ್ಸವ, ಪ್ರತಿ ಗುರುವಾರ ರಾತ್ರಿ ಪಲ್ಲಕ್ಕಿಸೇವೆ

ಭೀಮಾ ಅಮರಜಾ ಸಂಗಮ, ಸಂಗಮದಲ್ಲಿ ಔದುಂಬರ ಮರ, ಬೂದಿ ಬೆಟ್ಟ, ಅಷ್ಟ ತೀರ್ಥಗಳು, ಅಶ್ವತ್ಥ ಮರ, ಶ್ರೀ ಆದಿ ಶಂಕರಾಚಾರ್ಯ ಮಠ, ಎಲ್ಲ ಇವೆ

## 2. ಕಲಬುರಗಿ ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ಚಂದ್ರಲ ಪರಮೇಶ್ವರಿ ದೇವಸ್ಥಾನ, ಸನ್ನತಿ, ಚಿತಾಪುರ ತಾಲ್ಲೂಕು
2. ಶ್ರೀ ಉತ್ತರಾಧಿ ಮಠ, ಮಳಖೇಡ, ಸೆಡಮ್ ತಾಲ್ಲೂಕು
3. ಶ್ರೀ ದತ್ತಾತ್ರೇಯ ದೇವಸ್ಥಾನ, ಗಾಣಗಾಪುರ, ಅಫ್ಜಲ್‌ಪುರ ತಾಲ್ಲೂಕು
4. ಶ್ರೀ ಶರಣ ಬಸವೇಶ್ವರ ದೇವಸ್ಥಾನ, ಕಲಬುರಗಿ, ಕಲಬುರಗಿ ತಾಲ್ಲೂಕು
5. ಶ್ರೀ ಬುದ್ಧವಿಹಾರ, ಕಲಬುರಗಿ, ಕಲಬುರಗಿ ತಾಲ್ಲೂಕು

# 21. ಬೀದರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಬೀದರ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಈ ಜಿಲ್ಲೆಯನ್ನು ಕಲಬುರಗಿ, ಮಹಾರಾಷ್ಟ್ರ, ತೆಲಂಗಾಣಗಳು ಸುತ್ತುವರೆದಿವೆ. ಬೀದರ ನಗರವೇ ಜಿಲ್ಲಾಕೇಂದ್ರವು. ಜಿಲ್ಲೆಯಲ್ಲಿ ಔರಾದ, ಬಸವಕಲ್ಯಾಣ, ಭಾಲ್ಕಿ, ಬೀದರ, ಚಿಟಗುಪ್ಪ, ಹುಲಸೂರು, ಹುಮನಾಬಾದ, ಕಮಲನಗರ, ಎಂಬ 8 ತಾಲ್ಲೂಕುಗಳಿವೆ.

ಮಾಂಜ್ರಾ, ಕಾರಂಜಾ ಇವು ಪ್ರಮುಖ ನದಿಗಳು.

ಬಿದ್ರಿ ಬಹಳ ಜನಪ್ರಿಯ ಕರಕುಶಲ ವಸ್ತು,

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಬಸವಕಲ್ಯಾಣ,


BIDAR DISTRICT
KARNATAKA
N
MAHARASHRA STATE
AURAD
BHALKI
BASAVAKALYAN
HUMNABAD
ANDHARA PRADESH STATE
GULBURGA DISTRICT
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters

## 1. ಮಾಣಿಕ್ ಪ್ರಭು ದೇವಾಲಯ ಹುಮನಬಾದ

ಮಾಣಿಕ್ ಪ್ರಭು ದೇವಾಲಯ. ಬೀದರ್ ನಗರದಿಂದ 53 ಕಿಮೀ ದೂರದಲ್ಲಿ ಹುಮನಬಾದ ಪಟ್ಟಣದಲ್ಲಿನೆಲೆಸಿದೆ, ಮಾಣಿಕ್ ಪ್ರಭು ದೇವಾಲಯ ಒಂದು ಅನನ್ಯ ವಾಸ್ತುಶಿಲ್ಪದ ಸೌಂದರ್ಯ ಮತ್ತು ಪ್ರಮುಖ ಆಧ್ಯಾತ್ಮಿಕ ಮತ್ತು ಧಾರ್ಮಿಕ ಕೇಂದ್ರವಾಗಿದೆ. ಮಾಣಿಕ್ ಪ್ರಭು ದೇವಸ್ಥಾನವನ್ನು ಅವರ ಸಮಾಧಿಯ ಮೇಲೆ ನಿರ್ಮಿಸಲಾಗಿದೆ. ಸಂತ ಶ್ರೀ ಸದ್ಗುರು ಮಾಣಿಕ್ ಪ್ರಭು ಮಹಾರಾಜ್ ಹಾಗೂ ಅವರ ಆಧ್ಯಾತ್ಮಿಕ ನಿಲುವು ಮತ್ತು ಪವಿತ್ರ ಉಪಸ್ಥಿತಿಯನ್ನು ಅವರ 6 ನೇ ಉತ್ತರಾಧಿಕಾರಿ ಶ್ರೀ ಸದ್ಗುರು ಧನ್ಯನ್ ರಾಜ ಮಾಣಿಕ್ ಪ್ರಭು ಮಹಾರಾಜ್ ನಿರ್ವಹಿಸುತ್ತಿದ್ದಾರೆ. ದೇವಾಲಯವು ಹಿಂದೂ ಮತ್ತು ಮುಸ್ಲಿಂ ಭಕ್ತರಿಬ್ಬರನ್ನೂ ಆಕರ್ಷಿಸುತ್ತದೆ. ದೇವಾಲಯದ ಆಡಳಿತವು 140 ವರ್ಷಗಳಿಂದ ಶ್ರೀ ಮಾಣಿಕ್ ಪ್ರಭು ಸಂಸ್ಥಾನದ ವತಿಯಿಂದ ನಡೆಸಲ್ಪಡುತ್ತಿದೆ. ಇದೇ ಸಂಸ್ಥಾನವು ಅನೇಕ ಸಾಮಾಜಿಕ ಮತ್ತು ದತ್ತಿ ಸಂಸ್ಥೆಗಳನ್ನೂ ನಡೆಸುತ್ತದೆ.

ಈ ಸಂಸ್ಥಾನದ ಸಂಕೀರ್ಣವನ್ನು ಮಾಣಿಕ್ ನಗರ ಎಂದೇ ಕರೆಯಲಾಗುತ್ತದೆ. ಮುಖ್ಯ ದ್ವಾರವು ಐತಿಹಾಸಿಕ ನೌಬತ್ ಖಾನಾ, ಮೂಲಕ ಪ್ರವೇಶಿಸಿದರೆ ಆನಂದ ಮಂಟಪ, ಶೇಜ್ ಘರ್, ಚಾಂಡೇಲಿಯರ್ ನೋಡಬಹುದು. ಮುಕ್ತಿ ಮಂಟಪ, ಸಿದ್ಧ ನಿಕೇತನ, ಶ್ರೀ ಮಧುಮತಿ ಶ್ಯಾಮಲಾ ಮಂದಿರ, ಭಂಡಾರಖಾನ, ಶ್ರೀ ಕಾಲಾಗ್ನಿರುದ್ರ ಹನುಮಾನ್ ದೇವಸ್ಥಾನ, ಶ್ರೀ ಶಿವ ಪಂಚಾಯತನ ದೇವಸ್ಥಾನ, ಶ್ರೀ ಮಾರುತಿ ದೇವಸ್ಥಾನ, ಶ್ರೀ ಖಂಡೋಬಾ ದೇವಸ್ಥಾನ (ಗ್ರಾಮದ ಹೊರವಲಯದಲ್ಲಿರುವ ಬೆಟ್ಟದ ಮೇಲೆ ಇದೆ) ಮತ್ತು ವೀರಶೈವ ಮಠ ಮುಂತಾದವನ್ನು ಸಂದರ್ಶಿಸಬಹುದು.

ದರ್ಶನ ಸಮಯ - ಬೆಳಿಗ್ಗೆ 6:00 ರಿಂದ ರಾತ್ರಿ 9:00

ಉತ್ಸವಗಳು - ಮಾಣಿಕ್‌ನಗರದಲ್ಲಿ ವಾರ್ಷಿಕ ದತ್ತ ಜಯಂತಿ ಮಹೋತ್ಸವವು ಭೌಗೋಳಿಕ, ಭಾಷಾ, ಸಾಮಾಜಿಕ ಮತ್ತು ಧಾರ್ಮಿಕ ಅಡೆತಡೆಗಳನ್ನು ದಾಟಿದ ಉತ್ಸವವಾಗಿದೆ. ಇದರಲ್ಲಿ ನೂರಾರು ವೈದಿಕ ಪಂಡಿತರು, ಸಂಗೀತಗಾರರು, ಜಾನಪದ ಕಲಾವಿದರು ಮತ್ತು ಲಕ್ಷಾಂತರ ಭಕ್ತರು ಮಾಣಿಕ್‌ನಗರದಲ್ಲಿ ಸೇರುತ್ತಾರೆ. ಇದು ಅಂತರ್-ಧಾರ್ಮಿಕ ಸಾಮರಸ್ಯವನ್ನು ಉತ್ತೇಜಿಸುವ ಮತ್ತು ಭಾರತದ ಸಾಮಾಜಿಕ-ಸಾಂಸ್ಕೃತಿಕ ವೈವಿಧ್ಯತೆಯನ್ನು ಪ್ರದರ್ಶಿಸುವ ವಿಶಿಷ್ಟ ಹಬ್ಬವಾಗಿದೆ.

ಭಕ್ತರ ಸೌಲಭ್ಯಗಳು - ಮಠವು ವಸತಿ ಮತ್ತು ಭೋಜನ ವ್ಯವಸ್ಥೆ ಕಲ್ಪಿಸಿದೆ. ವಾಹನನಿಲುಗಡೆ, ಶೌಚಾಲಯಗಳು, ವೈದ್ಯಕೀಯ ಸೌಲಭ್ಯ, ಪಾದರಕ್ಷೆ ನಿಲುಗಡೆ.

## 2. ಬಸವೇಶ್ವರ ದೇವಸ್ಥಾನ ಮತ್ತು ಅನುಭವ ಮಂಟಪ, ಬಸವಕಲ್ಯಾಣ,

ಅನುಭವ ಮಂಟಪ - ಇದು ಪ್ರಪಂಚದ ಮೊದಲ ಸಂಸತ್ತು, 12 ನೇ ಶತಮಾನದಲ್ಲಿ ವೀರಶೈವ ಪಂಥದ ಅನುಯಾಯಿಗಳ, ಸಂತರು ಮತ್ತು ತತ್ವಜ್ಞಾನಿಗಳ ಅಕಾಡೆಮಿಯಾಗಿತ್ತು. ವೀರಶೈವಕ್ಕೆ ಸಂಬಂಧಿಸಿದ ಎಲ್ಲಾ ಧಾರ್ಮಿಕ ಮತ್ತು ತತ್ತ್ವ ಚಿಂತನೆಯ ಚಿಂತನೆಯ ಕಾರಂಜಿಯಾಗಿದೆ. ಅಲ್ಲಮಪ್ರಭು ಈ ಅನುಭವ ಮಂಟಪದ ಸ್ಥಾಪಕರಾಗಿದ್ದರು. ಈ ಸಂಸ್ಥೆಯು ವಚನ ಸಾಹಿತ್ಯದ ಕಾರಂಜಿಯಾಗಿದ್ದು, ಇದನ್ನು ವೀರಶೈವ ಧಾರ್ಮಿಕ ಮತ್ತು ತತ್ತ್ವ ಚಿಂತನೆಯ ಚಿಂತನೆಯನ್ನು ಪ್ರಸಾರ ಮಾಡಲು ವೇದಿಕೆಯಾಗಿ ಬಳಸಲಾಯಿತು. ಅಕ್ಕ ಮಹಾದೇವಿ, ಚನ್ನಬಸವಣ್ಣ ಮತ್ತು ಬಸವಣ್ಣ ಮುಂತಾದ ವೀರಶೈಯ ತತ್ವಶಾಸ್ತ್ರದ ಇತರ ಮಹಾ ವ್ಯಕ್ತಿಗಳು ಅನುಭವ ಮಂಟಪದಲ್ಲಿ ಪಾಲ್ಗೊಂಡಿದ್ದರು. ಅನುಭವ ಮಂಟಪವು ಮಹಾಮನೆ ಎಂದು ಕೂಡ ಕರೆಯಲ್ಪಡುತ್ತದೆ.

ಮಂಟಪದ ಮೇಲೆ ಶಿವಲಿಂಗದ ಆಕಾರವನ್ನು ಮಾಡಲಾಗಿದೆ. ಕಟ್ಟಡವು ತುಂಬಾ ಸರಳ ಮತ್ತು ಸುಂದರವಾಗಿದೆ. ಆಯತಾಕಾರದಲ್ಲಿರುವ ಈ ಕಟ್ಟಡದ ಒಳಗಡೆ ನಟ್ಟ ನಡುವೆ ಆಸನದ ರೀತಿಯಲ್ಲಿ ಕಲ್ಲಿನಿಂದ ಮಾಡಿದ ಆರು ಸೋಪಾನಗಳನ್ನೊಳಗೊಂಡ ಆಕೃತಿ ಇದೆ. ಆರು ಸೋಪಾನಗಳ ಮೇಲೆ ದೇವನಲ್ಲಿ ಐಕ್ಯ ಹೊಂದುವ ಮಾರ್ಗವನ್ನು ಸೂಚಿಸಲಾಗಿದೆ. ಸೋಪಾನಗಳ ಮೇಲೆ ಕೆಳಗಿನಿಂದ ಮೇಲಕ್ಕೆ (ಚಿತ್ರದಲ್ಲಿ ತೋರಿಸಿದಂತೆ) ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಬರೆಯಲಾಗಿದೆ. ಮಂಟಪದ ಒಳಗೆ ಗೋಡೆಗೆ ಸುತ್ತಲೂ ಬಸವಣ್ಣ ಹಾಗೂ ಇತರ ಶರಣರು ಮತ್ತು ಅವರ ಜೀವನದ ಅಮೂಲ್ಯ ಘಟನೆಗಳ ಚಿತ್ರಗಳನ್ನು ಹಾಕಿದ್ದಾರೆ. ಕಟ್ಟಡದ ಹೊರಮಗ್ಗಲಿನ ಗೋಡೆಗೂ ಸಹ ಚಿತ್ರಗಳನ್ನು ಹಾಕಿದ್ದಾರೆ. ಅರ್ಧ ಗಂಟೆ ಸಾಕು ಅನುಭವ ಮಂಟಪ ನೋಡಲು. ಪ್ರವಾಸಿಗರು ಬೇಗ ಹೋದರೆ ಮೊದಲು ಇದನ್ನು ನೋಡಿಕೊಂಡು ನಂತರ ಕೋಟೆ, ಗುಡಿ ಹಾಗೂ ಮೂರ್ತಿ ನೋಡಲು ಹೋಗುವದು ಒಳ್ಳೆಯದು.

ಬಸವೇಶ್ವರ ಮೂರ್ತಿ - ಮೊದಲು ಕೆಳಗಿರುವ ಶರಣರ ಗವಿ ನೋಡಿಕೊಂಡು ನಂತರ ಬಸವ ಮೂರ್ತಿ ನೋಡಿರಿ. ಶರಣರ ಗವಿಯು ಕಲ್ಲು, ಕಬ್ಬಿಣ ಮತ್ತು ಸಿಮೆಂಟ್ ಇಲ್ಲದೆ

ಮಾನವ ನಿರ್ಮಿತ ಗುಹೆ. ಇದನ್ನು ರಾಷ್ಟ್ರಕೂಟರ ಕಾಲದ ಅಜಂತಾ ಎಲ್ಲೋರಾ ಗುಹೆಗಳ ಮಾದರಿಯಲ್ಲಿ ನಿರ್ಮಿಸಲಾಗಿದೆ. ಈ ಗುಹೆಯ ಒಳಗಡೆ ಶರಣರ (ಅಕ್ಕ ಮಹಾದೇವಿ, ಚೆನ್ನ ಬಸವಣ್ಣ, ನೀಲಾಂಬಿಕಾ, ಮಡಿವಾಳ ಮಾಚಯ್ಯ, ರಾಮೇಶ್ವರ, ಅಲ್ಲಮಪ್ರಭು ಮತ್ತು ಬಸವಣ್ಣನವರ) ಪುತ್ಥಳಿಗಳನ್ನು ಕೆತ್ತಲಾಗಿದೆ. ಅಲ್ಲದೆ ಗುಹೆಯಲ್ಲಿಯೇ ಬಸವ ಪುತ್ಥಳಿಯ ಮುಂದೆ ಕುಳಿತು ಧ್ಯಾನ ಮಾಡಲು ಒಂದು ಧ್ಯಾನ ಮಂದಿರವು ಇದೆ. ಅಲ್ಲಿ ಒಂದೇ ಸಮಯಕ್ಕೆ ೧೦೦ ಜನ ಕುಳಿತು ಧ್ಯಾನ ಮಾಡಬಹುದು. ಈ ಗುಹೆಯನ್ನು ಉಸಿರಾಡುವ ಗುಹೆ ಎಂದು ಕೂಡ ಕರೆಯುತ್ತಾರೆ. ಕಾರಣ ಇಲ್ಲಿ ಒಂದೇ ಸಮಯಕ್ಕೆ ಸಾವಿರ ಜನ ಒಳಗೆ ಹೋದರು ಉಸಿರಾಡಲು ಯಾವುದೇ ಕಷ್ಟವಾಗುವದಿಲ್ಲ. ಹೊರಗಿನಂತೆಯೇ ಹವಾಗುಣ ಒಳಗೆಯೂ ಇದೆ. ಬಸವ ಧರ್ಮ ಪೀಠದ ಪೀಠಾಧ್ಯಕ್ಷ್ಯೇ ಮಾತೆ ಮಹಾದೇವಿ ಇವರ ಆಸಕ್ತಿಯ ಫಲವಾಗಿ ಈ ಗುಹೆಯ ನಿರ್ಮಾಣವಾಗಿದೆ. 108 ಅಡಿ ಎತ್ತರದ ಬಸವ ಪುತ್ಥಳಿ ಕೆಳಗೆ ನಿಂತು ನೋಡುತ್ತಿದ್ದರೆ ಬಸವಣ್ಣನವರ ತಲೆ ಆಕಾಶಕ್ಕೆ ಹತ್ತಿದೆ ಎಂದು ಭಾಸವಾಗುವಂತಿದೆ.

ಇಲ್ಲಿಯೂ ಕೂಡ ಸೋಪಾನಗಳ ಮೇಲೆ ಶರಣರ ಪುತ್ಥಳಿಗಳನ್ನು ಮಾಡಿ ಎತ್ತರದ ಕೊನೆಯಲ್ಲಿ ದೊಡ್ಡ ಬಸವ ಪುತ್ಥಳಿ ಪ್ರತಿಸ್ಥಾಪನೆಯಾಗಿದೆ. ಒಂದು ಕೈಯಲ್ಲಿ ವಚನಗಳ ಹೊತ್ತಿಗೆ, ಮತ್ತೊಂದು ಕೈಯಿಂದ ಆಶೀರ್ವಾದ ಮಾಡುತ್ತಿರುವ ಬಸವ ಮೂರ್ತಿ ನೋಡಲು ಎರಡು ಕಣ್ಣು ಸಾಲದು. ಮೂರ್ತಿಯ ಮುಂದೆ ತುಂಬಾ ಸುಂದರವಾದ ಕೈತೋಟವನ್ನು ಮಾಡಿದ್ದಾರೆ. ಪುತ್ಥಳಿಯ ಕೆಳಗೆ ಒಂದು ಸಭಾಂಗಣ ಮಾಡಿ ಪ್ರಾರ್ಥನಾ ಮಂದಿರವನ್ನು ಮಾಡಿದ್ದಾರೆ. ಪ್ರಾರ್ಥನಾ ಮಂದಿರದಲ್ಲಿ ಕುಳಿತರೆ ಮನಸಿಗೆ ಶಾಂತಿ ಎನಿಸಿ ಹೊರಬರಲು ಮನಸಾಗುವದೇ ಇಲ್ಲ.

ಬಸವ ಮೂರ್ತಿಯನ್ನು ನೋಡಿಕೊಂಡು, ಎಡಗಡೆ ಬಂದರೆ ಶರಣರ ಜೀವನದಲ್ಲಿ ನಡೆದ ಮಹತ್ವದ ಘಟನೆಗಳ ಸಂದರ್ಭಗಳ ಮೂರ್ತಿಗಳನ್ನು ಮಾಡಿದ್ದಾರೆ. ಒಂದು ಸಂದರ್ಭ ಮಹಾ ಶರಣ ಹರಳಯ್ಯ ಹಾಗೂ ಅವನ ಹೆಂಡತಿ ಶರಣೆ ಕಲ್ಯಾಣಮ್ಮ ತಮ್ಮ ತೊಡೆಯ ಚರ್ಮದಿಂದ ಬಸವಣ್ಣನವರಿಗಾಗಿ ಪಾದುಕೆಗಳನ್ನು ಮಾಡುತ್ತಿರುವ ಸಂದರ್ಭ. ಪಾದುಕೆಗಳನ್ನು ಮಾಡಿ ಒಂದು ಬುಟ್ಟಿಯಲ್ಲಿ ಹೂ ಹಾಸಿ ಅದರಲ್ಲಿ ಪಾದುಕೆಗಳನ್ನಿಟ್ಟುಕೊಂಡು ಹೋಗಿ ಬಸವಣ್ಣನವರಿಗೆ ಕೊಟ್ಟಾಗ, ಬಸವಣ್ಣನವರು ಈ ಪಾದುಕೆಗಳು ಕಾಲಿನಲ್ಲಲ್ಲ ನನ್ನ ತಲೆಯ ಮೇಲಿರಬೇಕಾದವೆಂದು ಅವನ್ನು ತಲೆಯಮೇಲೆ

ಇಟ್ಟುಕೊಂಡಿದ್ದರು. ಬಿಜ್ಜನಹಳ್ಳಿಯಲ್ಲಿ ಈಗಲೂ ಕೂಡ ಈ ಪಾದುಕೆಗಳನ್ನು ನೋಡಬಹುದು. 12 ನೇ ಶತಮಾನದಲ್ಲಿ ಜಾತಿಪದ್ಧತಿಯನ್ನು ಖಂಡಿಸಿ ಬಸವಣ್ಣನವರು ಬ್ರಾಹ್ಮಣನಾದ ಮಧುವರಸನ ಮಗಳಿಗೆ ಹಾಗೂ ಸಮಗಾರ ಹರಳಯ್ಯನ ಮಗನಿಗೆ ಅಂತರ್ಜ್ಯಾತಿ ವಿವಾಹ ಮಾಡಿಸಿದಾಗ, ಬಿಜ್ಜಳ ರಾಜ ಬಸವಣ್ಣನವರಿಗೆ ಗಡಿಪಾರು ಶಿಕ್ಷೆ ಕೊಟ್ಟು, ಆ ವಿವಾಹ ಮಾಡಿಸಿದ ಮಧುವರಸ, ಹರಳಯ್ಯ ಹಾಗೂ ಅವನ ಮಗನನ್ನು ಆನೆ ಕಾಲಿಗೆ ಕಟ್ಟಿ ಎಳೆಸಿದನು.ಇದನ್ನೇ ಬಿಂಬಿಸುವ ಮೂರ್ತಿಗಳನ್ನು ಇಲ್ಲಿ ಮಾಡಲಾಗಿದೆ.

ಬಸವ ಪುತ್ಥಳಿಯ ಪಕ್ಕದಲ್ಲಿಯೇ ಅಕ್ಕ ಮಹಾದೇವಿ ಗವಿ ಇದೆ.

ಬಸವೇಶ್ವರರ ಗುಡಿ - ನಗರದ ಮಧ್ಯವಿರುವ ಈ ಗುಡಿ ತುಂಬಾ ಸರಳವಾದ ಶೈಲಿಯಲ್ಲಿದೆ. ಎಲ್ಲ ದೇವಸ್ಥಾನಗಳಂತೆ ಇದಕ್ಕೂ ಕೂಡ ಶಿಖರವನ್ನು ನಿರ್ಮಿಸಲಾಗಿದೆ. ಗರ್ಭಗುಡಿಯ ಹೊರಗೆ ಅಂಗಣವನ್ನು ಮಾಡಲಾಗಿದೆ. ಬಸವ ದೇವನ ದರ್ಶನವಾದ ಮೇಲೆ ಅಲ್ಲಿ ಕುಳಿತುಕೊಳ್ಳಬಹುದು.

ಬಸವ ಕರ್ಮಭೂಮಿಯಾದ ಕಲ್ಯಾಣದಲ್ಲಿ ನೋಡಬೇಕಾದ ಇನ್ನಿತರ ಸ್ಥಳಗಳು - ಶರಣ ಉರಿಲಿಂಗ ಪೆದ್ದಿ ಮಠ, ಸಭಾ ಭವನ, ಕಂಬಳಿ ಮಠ, ಶರಣ ಶೈತ್ಯ ಗ್ರಂಥಾಲಯ, ಶರಣ ಅಲ್ಲಮ ಪ್ರಭು ಗದ್ದುಗೆ ಮಠ, ಹರಳಯ್ಯ ಮತ್ತು ಇತರ ಶರಣರ ಗವಿ, ಶರಣ ಮಡಿವಾಳ ಮಾಚಯ್ಯ ಹೊಂಡ, ಶರಣೆ ಅಕ್ಕ ನಾಗಮ್ಮ ಗವಿ, ಬಸವ ಅರಿವಿನ ಮನೆ, ಅಕ್ಕ ಮಹಾದೇವಿ ಆಶ್ರಮ, ಘನಲಿಂಗ ರುದ್ರಮುನಿ ಗವಿ, ಶರಣ ನೂಲಿ ಚಂದಯ್ಯ ಗವಿ, ತ್ರಿಪುರಾಂತ ಕೆರೆ.

## 3. ನರಸಿಂಹ ಝರಣಿ, ಶ್ರೀ ಪಾಪನಾಶ ಶಿವ ದೇವಸ್ಥಾನ ಬೀದರ

ನರಸಿಂಹ ಝುರನಿ ಇದು ಒಂದು ಗವಿ. ಸುಮಾರು ೩೦೦ ಮೀಟರ್ ಸುರಂಗದ ಒಳಗೆ ಹೋದರೆ ನರಸಿಂಹ ದೇವನ ದೇವಾಲಯವಿದೆ. ಈ ಸುರಂಗದುದ್ದಕ್ಕೂ ಸುಮಾರು ನಾಲ್ಕರಿಂದ ಐದು ಅಡಿ ನೀರು ಯಾವಾಗಲೂ ಹರಿಯುತ್ತಿರುತ್ತದೆ. ಈ ಸಣ್ಣ ಗುಡಿಯ ಹಿಂದೆ ಶಿವ ಪಾರ್ವತೀ ಕುಳಿತಿರುವ ಗೋಪುರವಿರುವದೇ ಗುಹೆಯ ಪ್ರಾರಂಭ. ಜನರು ನರಸಿಂಹ ದೇವರಿಗೆ ಹರಕೆ ಹೊತ್ತುಕೊಂಡು ಅಲ್ಲಿಗೆ ಬಂದಿರುತ್ತಾರೆ. ತುಂಬಾ ಜನಸಂದಣಿ ಇರುತ್ತದೆ. ಮೇಲೆ ಯಾವಾಗಲೂ ಬಾವಲಿಗಳು ಜೋತಾಡುತ್ತಿರುತ್ತವೆ, ಕೆಲವೊಮ್ಮೆ ಹಾರುತ್ತಲೂ

ಇರುತ್ತವೆ, ಆದರೆ ಈವರೆಗೂ ಅವು ಯಾರಿಗೂ ಹಾನಿ ಮಾಡಿಲ್ಲ. ಸುಮಾರು ಮುನ್ನೂರು ಮೀಟರ್ ನಡೆದ ಮೇಲೆ ಗರ್ಭ ಗುಡಿಯ ಹತ್ತಿರ ಅಷ್ಟೊಂದು ಜಾಗವಿಲ್ಲ, ಒಂದು ಸಮಯಕ್ಕೆ ಕೇವಲ ಎಂಟೇ ಜನ ದೇವರ ದರ್ಶನ ಮಾಡಲು ಸಾಧ್ಯ. ಮಿಕ್ಕ ಜನ ನೀರಿನಲ್ಲಿ ತಮ್ಮ ಸರದಿಗಾಗಿ ಕಾಯುತ್ತ ನಿಲ್ಲಬೇಕಾಗುತ್ತದೆ. ನೀರಿನಲ್ಲಿ ಸಲ್ಫರ್ ಇದೆ ಎಂದು, ನೀರಲ್ಲಿ ಹೋಗುವದರಿಂದ ಚರ್ಮ ರೋಗಗಳೆಲ್ಲ ಗುಣವಾಗುತ್ತವೆ. ಒಳಗಡೆ ಬೆಳಕು ಗಾಳಿ ಸೌಕರ್ಯವನ್ನು ಮಾಡಿದ್ದಾರೆ. ತುಂಬಾ ಜನ ಪ್ರವಾಸಿಗರು ತಮ್ಮ ಮಕ್ಕಳನ್ನು ಕರೆದುಕೊಂಡು ಬಂದಿರುತ್ತಾರೆ. ಅವರನ್ನು ತಮ್ಮ ಹೆಗಲ ಮೇಲೆ ಕೂರಿಸಿಕೊಂಡು ಹರಿ ಹರಿ ಎಂದು ನರಸಿಂಹ ನಾಮ ಸ್ಮರಣೆ ಮಾಡುತ್ತಾ ನಡೆಯುತ್ತಾರೆ.

## 4. ಗುರುದ್ವಾರ ಶ್ರೀ ನಾನಕ್ ಜೀರಾ ಸಾಹೇಬ, ಬೀದರ್

ಬೀದರ ಬಂದ ಪ್ರವಾಸಿಗರು ನೋಡಲೇ ಬೇಕಾದ ಮತ್ತೊಂದು ಸ್ಥಳವೆಂದರೆ ಗುರುದ್ವಾರ. 1948 ರಲ್ಲಿ ಸಿಖ್ ಗುರು 'ಗುರು ನಾನಕ' ರವರ ಹೆಸರಿನಲ್ಲಿ ಅಮೃತಶಿಲೆಯಲ್ಲಿ ಕಟ್ಟಲಾದ ಈ ಗುರುದ್ವಾರವು ಕಣ್ಣಿಗೆ ಹಾಗೂ ಮನಸಿಗೆ ತಂಪು ನೀಡುತ್ತದೆ. ಅಷ್ಟೇ ಸ್ವಚ್ಛವಾದ ವಾತಾವರಣ, ಮನೋಹರವಾದ ಸಂಗೀತ ಮನಸ್ಸನ್ನು ತಲ್ಲೀನಗೊಳಿಸುತ್ತದೆ. ಮುಖ್ಯರಸ್ತೆಯಿಂದ ಗುರುದ್ವಾರಕ್ಕೆ ಹೋಗುವ ದಾರಿಗೆ ಮುನ್ನ ಒಂದು ದೊಡ್ಡ ಕಮಾನಿದೆ. ಗುರುದ್ವಾರದ ಪ್ರವೇಶಕ್ಕೂ ಮುನ್ನ ಪಂಜಾಬಿ ಹೋಟೆಲ್ಗಳು, ಅಂಗಡಿಗಳು, ದವಾಖಾನೆ ಎಲ್ಲ ಇವೆ. ನಂತರ ಗುರುದ್ವಾರದ ದೊಡ್ಡ ಪ್ರವೇಶ ದ್ವಾರ. ಒಳಗೆ ಹೋಗುತ್ತಿದ್ದಂತೆ ಒಂದು ಕಡೆ ವಾಹನ ನಿಲುಗಡೆ ಇದೆ. ಬಲಬದಿಯಲ್ಲಿ ಬಂದ ಪ್ರವಾಸಿಗರಿಗೆ ಉಳಿದುಕೊಳ್ಳಲು ಕೊಠಡಿಗಳನ್ನು ಮಾಡಲಾಗಿದೆ. ಎದುರಿಗೆ ಗುರುದ್ವಾರವಿದೆ.

ಗುರುದ್ವಾರವನ್ನು ಸುಂದರವಾದ ಕಣಿವೆಯಲ್ಲಿ ಸ್ಥಾಪಿಸಲಾಗಿದೆ, ಇದು ಮೂರು ಕಡೆಗಳಲ್ಲಿ ಬೆಟ್ಟಗಳಿಂದ ಆವೃತವಾಗಿದೆ. ಈ ದೇವಾಲಯವು ದರ್ಬಾರ್ ಸಾಹಿಬ್, ದಿವಾನ್ ಹಾಲ್ ಮತ್ತು ಲಂಗಾರ್ ಹಾಲ್ ಅನ್ನು ಒಳಗೊಂಡಿದೆ. ಸುಖಾಸನ ಕೊಠಡಿಯಲ್ಲಿ, ಗುರು ಗ್ರಂಥ ಸಾಹಿಬ್, ಸಿಖ್ ಪವಿತ್ರ ಗ್ರಂಥವನ್ನು ಇರಿಸಲಾಗಿದೆ. ಲಿಖಾರಿ ರೂಮ್ ಎಂಬ ಪ್ರತ್ಯೇಕ ಕೊಠಡಿ ಇದೆ, ಅಲ್ಲಿ ದೇಣಿಗೆಗಳನ್ನು ಸ್ವೀಕರಿಸಲಾಗುತ್ತದೆ ಮತ್ತು ರಸೀದಿಗಳನ್ನು ನೀಡಲಾಗುತ್ತದೆ.

ಗುರುದ್ವಾರದ ಮುಖ್ಯದ್ವಾರ - ಈ ಮಹಾದ್ವಾರದ ಮೇಲೆ ಮೂರೂ ಗೋಪುರಗಳನ್ನು ನೋಡಬಹುದು. ಒಂದು ದೊಡ್ಡದು ಎರಡು ಸಣ್ಣ ಗೋಪುರಗಳು. ಗೋಡೆಯ ತುಂಬಾ ಚಿತ್ರ ವಿನ್ಯಾಸವನ್ನು ಕಾಣಬಹುದು. ಇದರ ಮೇಲೆ ಶ್ರೀ ಗುರು ನಾನಕ ದೇವಜಿ ದರ್ಶನ ಮಹಾದ್ವಾರವೆಂದು ಬರೆಯಲಾಗಿದೆ.

ಗುರುದ್ವಾರದ ಆವರಣದ ಒಳಗೆ ದೊಡ್ಡ ಮರಗಳಿವೆ. ಅವುಗಳ ಸುತ್ತಲೂ ಕಟ್ಟೆಯನ್ನು ಕಟ್ಟಿ ಹಾಗೂ ಅಲ್ಲಲ್ಲಿ ಬೆಂಚುಗಳನ್ನು ಮಾಡಿ, ದರ್ಶನಾರ್ಥಿಗಳಿಗೆ ಕುಳಿತುಕೊಳ್ಳಲು ಅನುಕೂಲವನ್ನು ಮಾಡಿದ್ದಾರೆ. ಒಳಗೆ ದರ್ಶನಕ್ಕೆ ಹೋಗುವ ಪ್ರತಿಯೊಬ್ಬರ ತಲೆಯ ಮೇಲೆಯೂ ಬಟ್ಟೆ ಇರಬೇಕಾದುದು ಕಡ್ಡಾಯ. ಯಾರಾದರೂ ಬಟ್ಟೆ ತಂದಿರಲಿಲ್ಲವೆಂದರೆ ಅಲ್ಲಿಯೇ ಗುರುದ್ವಾರದ ಎದುರಿಗೆ ಬಟ್ಟೆ ಇಟ್ಟಿರುತ್ತಾರೆ. ಒಳಗೆ ಹೋಗಿ ಬರಲು ಅವನ್ನು ಉಪಯೋಗಿಸಿ ಮತ್ತೆ ಅಲ್ಲಿಯೇ ಇಟ್ಟು ಬರುವದು ರೂಢಿ.

ಗುರುದ್ವಾರಕ್ಕೆ ಎರಡು ಕಡೆಯಿಂದ ಸೋಪಾನಗಳನ್ನು ಮಾಡಿದ್ದಾರೆ. ಸೋಪಾನಕ್ಕೂ ಮೊದಲು ಕೆಳಗೆ ಸ್ವಲ್ಪ ತೆಗ್ಗು ಮಾಡಿ ಅಲ್ಲಿ ನೀರನ್ನು ಬಿಟ್ಟಿರುತ್ತಾರೆ. ಹೋಗುವವರು ಆ ನೀರಲ್ಲಿ ಕಾಲಿಟ್ಟು ಮುಂದೆ ಹೋಗಬೇಕು. ಇದರರ್ಥ ಒಳಗೆ ಹೋಗುವ ಮೊದಲು ಕಾಲು ತೊಳೆದಂತೆ.

ನಾನಕರಿಂದ ಸೃಷ್ಟಿಯಾದ ನೀರಿನ ಚಿಲುಮೆ ನಾನಕ್ ಝೀರಾ ನೀರನ್ನು ಒಂದು ಕುಂಡದಲ್ಲಿ ಶೇಖರಿಸಲಾಗುತ್ತದೆ. ಅದನ್ನೇ ಅಮೃತ ಕುಂಡ ಎಂದು ಕರೆಯುತ್ತಾರೆ. ಈ ನೀರಿಂದ ಮೈ ತೊಳೆದರೆ, ನೀರನ್ನು ಕುಡಿದರೆ ಎಲ್ಲ ರೋಗರುಜಿನಗಳು ಹೋಗುತ್ತವೆಂಬುದು ಜನರ ನಂಬಿಕೆ. ಈ ನೀರಿನ ಚಿಲುಮೆ ಸುಮಾರು ೫೦೦ ವರ್ಷಗಳಿಂದ ಹರಿಯುತ್ತಿದೆ. ಯಾವತ್ತೂ ಬತ್ತಿಲ್ಲ ಎಂದು ಹೇಳುತ್ತಾರೆ.

ಖಂಡ ಎಂದು ಕರೆಯುತ್ವ ಸಿಖ್ ರ ಮಿಲಿಟರಿ ಚಿಹ್ನೆಯನ್ನೂ ನೋಡಬಹುದು. ಇದು ಮೂರು ಶಸ್ತ್ರಾಸ್ತ್ರಗಳನ್ನು ಮತ್ತು ಒಂದು ವೃತ್ತವನ್ನು ಒಳಗೊಂಡಿದೆ. ಒಂದು ಖಡ್ಗ, ಎರಡು ಕೃಪಣಗಳು ಮತ್ತು ಒಂದು ವೃತ್ತ. ಒಟ್ಟಿನಲ್ಲಿ ಈ ನಿರ್ದಿಷ್ಟ ಪ್ರದೇಶ ಒಂದು ಸಣ್ಣ ಪಂಜಾಬನ್ನು ನಿದರ್ಶಿಸುತ್ತದೆ. ಇಲ್ಲಿಯೇ ಪಕ್ಕದಲ್ಲಿ ವಸ್ತುಸಂಗ್ರಹಾಲಯವಿದೆ. ಅಲ್ಲಿ ಸಿಖ್ ರ ಐತಿಹಾಸಿಕ ಘಟನೆಗಳ ಕುರಿತು ವರ್ಣಚಿತ್ರಗಳನ್ನು ಹಾಗೂ ಬರಹಗಳನ್ನು ಕಾಣಬಹುದು.

## 5. ಬೀದರ ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ಚಿದಂಬರ ಆಶ್ರಮ ಗುಂಪಾ ಬೀದರ, ಬೀದರ ತಾಲ್ಲೂಕು
2. ಶ್ರೀ ವೀರಭದ್ರೇಶ್ವರ ದೇವಸ್ಥಾನ, ಹುಮನಾಬಾದ, ಹುಮನಾಬಾದ ತಾಲ್ಲೂಕು

# 22. ವಿಜಯಪುರ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ವಿಜಯಪುರ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ವಿಜಯಪುರ ನಗರವು ಜಿಲ್ಲೆಯ ಜಿಲ್ಲಾಡಳಿತ ಮತ್ತು ಕೇಂದ್ರಸ್ಥಳ. ವಿಜಯಪುರ ಜಿಲ್ಲೆಯು ಕಲಬುರಗಿ, ರಾಯಚೂರು, ಬಾಗಲಕೋಟೆ, ಬೆಳಗಾವಿ, ಮಹಾರಾಷ್ಟ್ರಗಳಿಂದ ಆವೃತಗೊಂಡಿದೆ. ಬಬಲೇಶ್ವರ, ಬಸವನ ಬಾಗೇವಾಡಿ, ಚಡಚಣ, ದೇವರಹಿಪ್ಪರಗಿ, ಇಂಡಿ, ಕೊಲ್ಹಾರ್, ಮುದ್ದೇಬಿಹಾಳ, ನಿಡಗುಂದಿ, ಸಿಂದಗಿ, ತಾಳಿಕೋಟೆ, ತಿಕೋಟ, ವಿಜಯಪುರ ಎಂಬ 12 ತಾಲ್ಲೂಕುಗಳಿವೆ.

ಕೃಷ್ಣಾ , ಭೀಮಾ ಇವು ಪ್ರಮುಖ ನದಿಗಳು.


VIJAYAPURA DISTRICT
KARNATAKA
N
GULBARGA DISTRICT
MAHARASHTRA STATE
INDI
SINDGI
BIJAPUR
GULBARGA DISTRICT
BELGAUM DISTRICT
BASAVANA BAGEVADI
MUDDEBIHAL
RAICHUR DISTRICT
BAGALKOT DISTRICT


KEY MAP

LEGEND
Metalled road
National Highway
Railway track
Taluk boundary
District headquarters
Taluk headquarters

## 1. ಶಿವನ ವಿಗ್ರಹ, ಶಿವಗಿರಿ, ವಿಜಯಪುರ

ಭಾರತ ದೇಶದ ಮೂರನೇಯ ಅತಿ ಎತ್ತರದ ಶಿವನ ಪ್ರತಿಮೆಯಾಗಿದೆ. ಇದನ್ನು ಶಿವಗಿರಿ ಎಂತಲೂ ಕರೆಯುತ್ತಾರೆ. ಪ್ರತಿಮೆಯು 85(26 ಮೀಟರ್) ಅಡಿ ಎತ್ತರವಾಗಿದ್ದು ಮತ್ತು 1500 ಟನ್ ತೂಕ ಇದ್ದು ಟಿ.ಕೆ.ಪಾಟೀಲ ಬೆನಕಟ್ಟಿ ಚಾರಿಟೇಬಲ್ ಟ್ರಸ್ಟ್, ವಿಜಯಪುರ ವತಿಯಿಂದ ನಿರ್ಮಿಸಲಾಗಿದೆ.

ಇದನ್ನು ಶಿವಮೊಗ್ಗ ಮೂಲದ ಬೆಂಗಳೂರಿನ ವಾಸ್ತುಶಿಲ್ಪಿಗಳಾದ ಪ್ರಶಾಂತ, ಆಚಾರ್ಯ, ರಾಜಶೇಖರ ರಾಜುರವರು ನೀಲನಕ್ಷೆಯನ್ನು ತಯಾರಿಸಿ ಕೇವಲ 13 ತಿಂಗಳಿನಲ್ಲಿ ನಿರ್ಮಿಸಿದ್ದಾರೆ. ಪ್ರತಿಮೆಯ ಕೆಳಗಡೆ ಚಿಕ್ಕ ಶಿವನ ಪ್ರತಿಮೆಯನ್ನು ಸ್ಥಾಪಿಸಲಾಗಿದ್ದು ಒಳಗಡೆ ಗೋಡೆಯ ಮೇಲೆ ಶಿವನ ಚರಿತ್ರೆಯನ್ನು ಬರೆಸಲಾಗಿದೆ.

ಪಕ್ಕದಲ್ಲಿ 18 ಎಕರೆಯಲ್ಲಿ ಅನಾಥಾಲಯ, ವಸತಿ ಶಾಲೆ ಮತ್ತು ಬಸಂತ ಉದ್ಯಾನವನವನ್ನು ನಿರ್ಮಿಸಲಾಗಿದೆ. ಟ್ರಸ್ಟನ ಅಧ್ಯಕ್ಷರಾದ ಶ್ರೀ ಬಸಂತಕುಮಾರ ಪಾಟೀಲರು ಅವರ ತಾಯಿಯ ತುಲಾಭಾರವನ್ನು ಚಿನ್ನದಲ್ಲಿ ಮಾಡಿ(55 ಕೆ.ಜಿ ಚಿನ್ನವು 4.5 ಕೋಟಿ ಬೆಲೆಯಾಗಿತ್ತು) ಅದರಿಂದ ಬಂದ ಹಣದಲ್ಲಿ ಶಿವನ ಬೃಹತ ಪ್ರತಿಮೆಯನ್ನು ನಿರ್ಮಿಸಿ ಅಭಿವೃದ್ಧಿಪಡಿಸುತ್ತಿದ್ದಾರೆ.

## 2. ಸಿದ್ದೇಶ್ವರ ದೇವಾಲಯ, ವಿಜಯಪುರ

ವಿಜಯಪುರ ನಗರದ ಹೃದಯ ಭಾಗದಲ್ಲಿ ಸ್ಥಾಪಿತವಾಗಿದ್ದು ಪವಿತ್ರ ಹಿಂದೂ ದೇವಾಲಯವಾಗಿದೆ. ಪ್ರತಿವರ್ಷ ಸಾವಿರಾರು ಪ್ರವಾಸಿಗರು ಭೇಟಿ ನೀಡುತ್ತಾರೆ. ಪ್ರತಿವರ್ಷ ಮಕರ ಸಂಕ್ರಾಂತಿ ದಿನದಂದು ಶ್ರೀ ಸಿದ್ದೇಶ್ವರ ಜಾತ್ರೆಯನ್ನು ಆಚರಿಸುತ್ತಾರೆ. ಇದೇ ಜಾತ್ರೆಯಲ್ಲಿ ದನಗಳ ಜಾತ್ರೆಯು ಕೂಡ ಜರಗುತ್ತದೆ. ಮಕರ ಸಂಕ್ರಾಂತಿಯ ರಾತ್ರಿಯಂದು ಡಾ. ಬಿ. ಆರ್. ಅಂಬೇಡ್ಕರ್ ಜಿಲ್ಲಾ ಕ್ರೀಡಾಂಗಣದಲ್ಲಿ ಮದ್ದು ಸುಡುವುದು ಕಾರ್ಯಕ್ರಮವನ್ನು ಆಚರಿಸುತ್ತಾರೆ. ಈ ದೇವಾಲಯವನ್ನು ಸೋಲ್ಲಾಪುರದ ಶ್ರೀ ಸಿದ್ಧರಾಮೇಶ್ವರ (ಬಸವಾದಿ ಶರಣರು) ನೆನಪಿಗಾಗಿ ನಿರ್ಮಿಸಲಾಗಿದೆ.

## 3. ನರಸಿಂಹ ದೇವಾಲಯ, ತೊರವಿ, ವಿಜಯಪುರ

ವಿಜಯಪುರ ನಗರದ ಹೊರಭಾಗದ ತೊರವಿ ಗ್ರಾಮದಲ್ಲಿ ತೊರವಿ ನರಸಿಂಹ ದೇವಾಲಯವಿದೆ. ಕುಮಾರ ವಾಲ್ಮೀಕಿಯು ಇದೇ ದೇವಾಲಯ ದಲ್ಲಿ ತೊರವಿ ರಾಮಾಯಣವನ್ನು ಕನ್ನಡದಲ್ಲಿ ರಚಿಸಿದ್ದಾನೆ. ತೊರವಿ ರಾಮಾಯಣ ಕೃತಿಯನ್ನು ದೇವಸ್ಥಾನದ ಒಳ ಆವರಣದಲ್ಲಿ ಪ್ರದರ್ಶನಕ್ಕಿಡಲಾಗಿದ್ದು ಕೃತಿಯಲ್ಲಿನ ಸಾಲುಗಳನ್ನು ದೇವಾಲಯದ ಒಳ ಆವರಣದಲ್ಲಿ ಬರೆಯಲಾಗಿದೆ.

ತೊರವಿ ಗ್ರಾಮವು ವಿಜಯಪುರದಿಂದ ಪಶ್ಚಿಮಕ್ಕೆ 6 ಕಿ.ಮೀ. ಅಂತರದಲ್ಲಿ ಅಥಣಿಗೆ ಹೋಗುವ ಮಾರ್ಗದಲ್ಲಿರುವ ಗ್ರಾಮ. ಈ ಗ್ರಾಮದಲ್ಲಿ ಪ್ರಾಚೀನ ಶ್ರೀ ಲಕ್ಷ್ಮೀ ನರಸಿಂಹ ದೇವಸ್ಥಾನವಿದೆ. ಈ ದೇವಸ್ಥಾನ ಗುಹಾಂತರ ದೇವಾಲಯದಂತೆ ಗೋಚರಿಸುತ್ತದೆ. ಆಕರ್ಷಕವಾದ ನರಸಿಂಹ ವಿಗ್ರಹ ಗಮನ ಸೆಳೆ ಯುತ್ತದೆ. 15 ನೇ ಶತಮಾನದಲ್ಲಿ ನರಹರಿ ಎಂಬ ಕವಿ, ಕುಮಾರ ವಾಲ್ಮೀಕಿ ಎಂಬ ಹೆಸರಿನಿಂದ ನರಸಿಂಹ ದೇವಸ್ಥಾನದಲ್ಲಿಯೇ ಕುಳಿತು ತೊರವಿ ರಾಮಾಯಣವನ್ನು ರಚಿಸಿದ ಎಂಬ ಪ್ರತೀತಿ ಇದೆ.

## 4. ವಿಜಯಪುರ ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ಪ್ರಸನ್ನ ಗಣಪತಿ ದೇವಸ್ಥಾನ, ವಿಜಯಪುರ, ವಿಜಯಪುರ ತಾಲ್ಲೂಕು
2. ಶ್ರೀ ಬಸವೇಶ್ವರ ದೇವಲಯ, ಬಸವನ ಬಾಗೇವಾಡಿ

# 23. ಬಾಗಲಕೋಟೆ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಬಾಗಲಕೋಟೆ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಬಾಗಲಕೋಟೆ ನಗರವು ಜಿಲ್ಲೆಯ ಜಿಲ್ಲಾಡಾಳಿತ ಮತ್ತು ಕೇಂದ್ರಸ್ಥಳ. ಬಾಗಲಕೋಟೆ ಜಿಲ್ಲೆಯು ವಿಜಯಪುರ, ರಾಯಚೂರು, ಕೊಪ್ಪಳ, ಗದಗ, ಬೆಳಗಾವಿ, ಜಿಲ್ಲೆಗಳಿಂದ ಆವೃತಗೊಂಡಿದೆ. ಜಿಲ್ಲೆಯಲ್ಲಿ ಬಾದಾಮಿ, ಬಾಗಲಕೋಟೆ, ಬೀಳಗಿ, ಗುಳೇದಗುಡ್ಡ, ಹುನಗುಂದ, ಇಲಕಲ್, ಜಮಖಂಡಿ, ಮುಧೋಳ, ರಬಕವಿ, ಬನಹಟ್ಟಿ ಎಂಬ 10 ತಾಲ್ಲೂಕುಗಳಿವೆ.

ಮುಧೋಳ ತಳಿಯ ನಾಯಿಗಳು, ಇಳಕಲ್ ಸೀರೆಗಳು, ಅಮೀನಗಡದ ಕರದಂಟು

ಕೃಷ್ಣಾ, ಘಟಪ್ರಭಾ, ಮಲಪ್ರಭಾ ಇವು ಪ್ರಮುಖ ನದಿಗಳು.


BAGALAKOTE DISTRICT
KARNATAKA
N
JAMKHANDI
BIJAPUR DISTRICT
BILGI
MUDHOL
BAGALKOT
BELGAUM DISTRICT
HUNGUND
BADAMI
RAICHUR DISTRICT
GADAG DISTRICT
KOPPAL DISTRICT
LEGEND
KEY MAP
Metalled road
National Highway
Railway track
Taluk boundary
District headquarters
Taluk headquarters
Hilly area

## 1. ಬನಶಂಕರಿ ದೇವಸ್ಥಾನ, ಬನಶಂಕರಿ ಬಾದಾಮಿ

ಬದಾಮಿಪಟ್ಟಣದಿಂದ 5 ಕಿಮಿ ದೂರದಲ್ಲಿರುವ ಬನಶಂಕರಿಯು ಅತ್ಯಂತ ಪುರಾತನ ದೇವಸ್ಥಾವಾಗಿದ್ದು ಇದರ ನಿರ್ಮಾಣದ ಅವಧಿ ಅಂದಾಜು 7ನೇ ಶತಮಾನ. ಇದು ಚಾಲುಕ್ಯರಿಂದ ನಿರ್ಮಾಣವಾದ ದೇವಾಲಯವಾಗಿದ್ದು ತಾಯಿ ಬನಶಂಕರಿ ದೇವಿಯು ಚಾಲುಕ್ಯರ ಆರಾಧ್ಯ ದೈವವಾಗಿದ್ದಾಳೆ.

ತಾಯಿ ಬನಶಂಕರಿಯು ಅರಣ್ಯದಲ್ಲಿ ವಾಸವಾಗಿರುವುದರಿಂದ ತಾಯಿಗೆ ಬನಶಂಕರಿ ಅಥವಾ ವನಶಂಕರಿ ಎಂದು ಹೆಸರು ಬಂದಿತು.

ಭೂಮಿಯಲ್ಲಿ ಮಳೆ ಹಾಗೂ ಬೆಳೆ ಇಲ್ಲದ ಸಮಯದಲ್ಲಿ ಭಕ್ತರೆಲ್ಲರೂ ಹಸಿವಿನಿಂದ ಬಳಲುತ್ತಿರುವಾಗ ದೇವಿಯು ತನ್ನ ದೇಹದ ಶಾಖದಿಂದ ಹಣ್ಣು ಮತ್ತು ಹಂಪಲು ಉತ್ಪತ್ತಿ ಮಾಡಿ ಆಹಾರವನ್ನು ನೀಡಿ ತಾಯಿಯು ಭಕ್ತರನ್ನು ಹರಸಿದಳು ಅದಕ್ಕಾಗಿ ದೇವಿಯನ್ನು ಶಾಖಂಬರಿ ದೇವಿ ಎಂದು ಕರೆಯುತ್ತಾರೆ. ದೇವಿಗೆ ಭಕ್ತರು ರಾಜ್ಯ ರಾಜ್ಯಗಳಿಂದ ಬಂದು ಪೂಜೆಯನ್ನು ಸಲ್ಲಿಸುತ್ತಾರೆ ವಿಶೇಷವಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರದಲ್ಲಿ ದೇವಿಗೆ ಅತಿ ಹೆಚ್ಚು ಭಕ್ತರಿದ್ದಾರೆ. ದೇವಸ್ಥಾನದ ಸುತ್ತ ಹವನ ಮಂಟಪ, ಆಂಜನೇಯನ ಮೂರ್ತಿ, ಶಿವ ಹಾಗೂ ಹಲವಾರು ದೇವತೆಗಳು ನೆಲೆಸಿವೆ.

ತೀರ್ಥಗಳು - ದೇವಾಲಯದ ಸುತ್ತಲೂ ಹಲವಾರು ತೀರ್ಥಗಳು ಇದ್ದು ಬಂದ ಭಕ್ತರ ಪಾಪವನ್ನು ನಾಶ ಮಾಡಿ ಪುನೀತಗೊಳಿಸುತ್ತವೆ ಇದರಲ್ಲಿ ಮಾಲಿನಿ ತೀರ್ಥ, ಹರಿದ್ರಾ ತೀರ್ಥ, ಸರಸ್ವತಿ ತೀರ್ಥ, ಅಗಸ್ತ್ಯ ತೀರ್ಥ, ಪದ್ಮ ತೀರ್ಥ, ತೈಲ ತೀರ್ಥ, ರಂಗ ತೀರ್ಥ, ಅಶ್ವತ್ಥ ತೀರ್ಥ, ಭಾಸ್ಕರ ತೀರ್ಥ, ಕೋಟಿ ತೀರ್ಥ, ನಾಗೇಶ ತೀರ್ಥ, ವಿಷ್ಣು ಪುಷ್ಕರಣೆ, ವಶಿಷ್ಟ, ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ತೀರ್ಥಗಳು ಪ್ರಮುಖವಾದವು.

ಬನಶಂಕರಿ ದೇವಿಯ ಮೂರ್ತಿ - ಬನಶಂಕರಿ ದೇವಿಯನ್ನು ನವದುರ್ಗೆಯರಲ್ಲಿ 6ನೇ ಅವತಾರ ಎಂದು ಹೇಳಲಾಗುತ್ತದೆ. ಶ್ರೀ ಬನಶಂಕರಿ ದೇವಿ ಮೂರ್ತಿಯು 5 ಅಡಿ ಎತ್ತರ ಇದೆ. ಕಪ್ಪು ಶಿಲೆಯಲ್ಲಿ ಸಿಂಹ ವಾಹನೆಯಾಗಿ ತಾಯಿಯು ಕಾಲಿನಿಂದ ರಾಕ್ಷಸನನ್ನು ಮೆಟ್ಟಿದ್ದಾಳೆ. ದೇವಿಗೆ ಅಷ್ಟ ಭುಜ-ಕೈಗಳಿವೆ. ಬಲಗೈ ನಲ್ಲಿ ಖಡ್ಗ, ಗಂಟೆ, ತ್ರಿಶೂಲ ಹಾಗು ಲಿಪ್ತಿ ಹಾಗೂ ಎಡಗೈಯಲ್ಲಿ ಡಮರು, ಡಾಲು, ರುಂಡ ಮತ್ತು ಅಮೃತ ಕುಂಡ ಇವೆ. ಈ ದೇವಿ ತ್ರಿನೇತ್ರೆ. ಬನಶಂಕರಿ ದೇವಿಯನ್ನು ಮಹಾಕಾಳಿ, ಮಹಾಲಕ್ಷ್ಮೀ ಹಾಗು ಮಹಾ

ಸರಸ್ವತಿ ಎಂತಲೂ ಕರೆಯುತ್ತಾರೆ. ತಾಯಿಯ ಬಲಗೈಯು ಸುಜ್ಞಾನದ ಸಂಕೇತ ಎಡಗೈಯು ಶೌರ್ಯದ ಸಂಕೇತವಾಗಿದೆ. ದೇವಸ್ಥಾನದ ಶಿಖರವು ಚೌಕ ಕೋನಾಕಾರವಾಗಿ ಹಂತ ಹಂತವಾಗಿ ಮೇಲೆರುತ್ತಾ ಹೋಗಿದೆ. ಗೋಪುರದಲ್ಲಿ ಯಾವ ದೇವರ ವಿಗ್ರಹಗಳೂ ಇಲ್ಲ. ದೇವಾಲಯಕ್ಕೆ 4 ದಿಕ್ಕಿನಲ್ಲಿ ದ್ವಾರ ಇವೆ. ದೇವಸ್ಥಾನದ ಆವರಣದಲ್ಲಿ 4 ದೀಪಸ್ತಂಭ ಇವೆ. ಕಾರ್ತಿಕ ಮಾಸದಲ್ಲಿ ಈ ದೀಪ ಸ್ತಂಭಗಳಲ್ಲಿ ಭಕ್ತರು ದೀಪವನ್ನು ಬೆಳಗುತ್ತಾರೆ.

ಪ್ರಣಾಮ ಮಂತ್ರ - ಓಂ ಶ್ರೀ ಕ್ಷೇತ್ರ ಬನಶಂಕರಿ ಪುರವರಾಧೀಶ್ವರೀ ಶ್ರೀ ಸದಾಶಿವ ರುದ್ರ ಸಮೇತ ಶ್ರೀ ವನಶಂಕರಿ ಶಾಕಾಂಬರಿ ದೇವೀ ಪರಬ್ರಹ್ಮಣ್ಯೈ ನಮಃ ||

ಪ್ರಣಾಮ ಸ್ತೋತ್ರ - ರಹಸ್ಯಮೇತದಖಿಲಂ ದೇವಾನಾಂ ಪರಮೇಶ್ವರಿ |
ಪರಾಪರರಹಸ್ಯಂ ಚ ಜಗತಾಂ ಭುವನೇಶ್ವರಿ ||

ಉತ್ಸವಗಳು - ಬನಶಂಕರಿ ಜಾತ್ರೆಯು ಅತಿ ದೊಡ್ಡ ಜಾತ್ರೆಯಾಗಿದ್ದು ಪ್ರತಿ ವರ್ಷ ಬನದ ಹುಣ್ಣಿಮೆಯ ದಿನ ನಡೆಯುತ್ತದೆ

## 2. ಬಾಗಲಕೋಟೆ ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ಮಲ್ಲಿಕಾರ್ಜುನ ದೇವಾಲಯಗಳ ಗುಂಪು, ಬಾದಾಮಿ, ಬಾದಾಮಿ ತಾಲ್ಲೂಕು
2. ಶ್ರೀ ಶಿವಯೋಗಿ ಮಂದಿರ ದೇವಸ್ಥಾನ, ಬಾದಾಮಿ, ಬಾದಾಮಿ ತಾಲ್ಲೂಕು
3. ಶ್ರೀ ಬನಶಂಕರಿ ದೇವಸ್ಥಾನ, ಬನಶಂಕರಿ, ಬಾದಾಮಿ ತಾಲ್ಲೂಕು
4. ಶ್ರೀ ಸಂಗಮೇಶ್ವರ ದೇವಸ್ಥಾನ, ಮಹಾಕೂಟ, ಬಾದಾಮಿ ತಾಲ್ಲೂಕು
5. ಶ್ರೀ ನಾಗನಾಥ ದೇವಸ್ಥಾನ, ನಾಗನಾಥ, ಬಾದಾಮಿ ತಾಲ್ಲೂಕು
6. ಶ್ರೀ ಸಂಗಮೇಶ್ವರ ದೇವಸ್ಥಾನ, ಪಟ್ಟದಕಲ್ಲು, ಬಾದಾಮಿ ತಾಲ್ಲೂಕು
7. ಶ್ರೀ ಸಂಗಮನಾಥ ದೇವಸ್ಥಾನ, ಚಿಕ್ಕಸಂಗಮ, ಬಿಳಗಿ ತಾಲ್ಲೂಕು
8. ಶ್ರೀ ದುರ್ಗಾ ದೇವಸ್ಥಾನ, ಐಹೊಳೆ, ಹುನಗುಂದ ತಾಲ್ಲೂಕು

9. ಶ್ರೀ ಸಂಗಮನಾಥ ದೇವಸ್ಥಾನ, ಬಸವೇಶ್ವರ ಐಕ್ಯ ಲಿಂಗ, ಬಸವ ಧರ್ಮ ಪೀಠದ ಮಹಾಮನೆ ಸಂಕೀರ್ಣ, ಪೂಜಾವನ, ಬೃಹತ್ ಸಭಾ ಭವನ, ಬಸವ ಗೋಪುರ, ಶಿಲ್ಪಕಲೆಗಳ ಸಂಗ್ರಹಾಲಯ ಕೂಡಲಸಂಗಮ, ಹುನಗುಂದ ತಾಲ್ಲೂಕು
10. ಶ್ರೀ ಬೆಟ್ಟದ ತುದಿ ಹನುಮಾನ್, ಶ್ರೀ ಬನಶಂಕರಿ, ಶ್ರೀ ಸಂಗಮೇಶ್ವರ ದೇವಸ್ಥಾನ ಅಮ್ಮಿನಗಡ, ಹುನಗುಂದ ತಾಲ್ಲೂಕು.

## 24. ಗದಗ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಗದಗ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಗದಗ ಪಟ್ಟಣವು ಜಿಲ್ಲಾಡಳಿತ ಕೇಂದ್ರ. ಈ ಜಿಲ್ಲೆಯು ಕೊಪ್ಪಳ, ಬಾಗಲಕೋಟೆ, ಹಾವೇರಿ, ಧಾರವಾಡ ಜಿಲ್ಲೆಗಳಿಂದ ಸುತ್ತುವರಿದಿದೆ. ಗದಗ, ಮುಂಡರಗಿ, ನರಗುಂದ, ರೋಣ, ಶಿರಹಟ್ಟಿ ಎಂಬ 5 ತಾಲ್ಲೂಕುಗಳನ್ನು ಹೊಂದಿದೆ.

ಡಂಬಳದ ದ್ರಾಕ್ಷಿ ಮತ್ತು ಪೇರಲ, ಗದಗದ ಮುದ್ರಣಾಲಯಗಳು, ಬೆಟಗೇರಿ ಕೈಮಗ್ಗಗಳು ತುಂಬಾ ಹೆಸರುವಾಸಿಯಾಗಿವೆ.

ಕೃಷ್ಣಾ, ಮಲಪ್ರಭಾ, ತುಂಗಭದ್ರಾ, ಬೆಣ್ಣೆಹಳ್ಳ ಮುಂತಾದ ನದಿಗಳು ಈ ಜಿಲ್ಲೆಯಲ್ಲಿ ಹರಿದಿವೆ.

ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಗದಗ




## 1. ವೀರನಾರಾಯಣ ದೇವಸ್ಥಾನ, ಗದಗ

ಪ್ರಸಿದ್ಧ ಪುಣ್ಯ ಕ್ಷೇತ್ರವಾದ ಗದಗವು ಕರ್ನಾಟಕದ ಮುಖ್ಯ ಪ್ರವಾಸಿ ತಾಣವೂ ಹೌದು. ಇಲ್ಲಿನ ಪ್ರಮುಖ ದೇವಸ್ಥಾನವನ್ನು ಶ್ರೀ ವಿಷ್ಣುವಿಗೆ ಅರ್ಪಿಸಲಾಗಿದ್ದು, ಭಗವಂತನು ವೀರ ನಾರಾಯಣನ ರೂಪದಲ್ಲಿ ಕಾಣಿಸಿಕೊಂಡಿದ್ದಾನೆ. 12ನೇ ಶತಮಾನದಲ್ಲಿ, ರಾಜ ವಿಷ್ಣುವರ್ಧನನ ಕಾಲದಲ್ಲಿ ಮಂದಿರ ನಿರ್ಮಾಣವಾಯಿತು. ರಾಜನ ಹೆಂಡತಿಗೆ ಕುಷ್ಠರೋಗ ಬಂದಾಗ, ಗುರುಗಳ ಆಣತಿಯಂತೆ ದೊರೆ ವಿಷ್ಣುವರ್ಧನನು ಐದು ದೇವಸ್ಥಾನ ಕಟ್ಟಿಸಲು ಮುಂದಾದನು. ಆಗ ಗದುಗಿನ ವೀರ ನಾರಾಯಣ, ಮೇಲುಕೋಟೆ ಚಲುವ ನಾರಾಯಣ, ಬೇಲೂರಿನ ಚನ್ನಕೇಶವ, ತಲಕಾಡು ಕೀರ್ತಿನಾರಾಯಣ, ತೊಂಡನೂರಿನ ನಂಬಿನಾರಾಯಣ ದೇವಾಲಯಗಳು ನಿರ್ಮಾಣವಾದವು.

ಈ ಮಂದಿರವು ವಿವಿಧ ವಾಸ್ತುಶಿಲ್ಪದ ಶೈಲಿಯನ್ನು ಹೊಂದಿದೆ. ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಕಾಲದ ವಾಸ್ತುಶಿಲ್ಪವನ್ನು ಇಲ್ಲಿ ಕಾಣಬಹುದು. ಗರ್ಭಗುಡಿಯಲ್ಲಿ ನೀಲಮೇಘಶ್ಯಾಮವರ್ಣ ಶಿಲೆಯಲ್ಲಿ ಕೆತ್ತಿದ ಶ್ರೀ ವೀರನಾರಾಯಣಸ್ವಾಮಿಯ ಅಪೂರ್ವ ವಿಗ್ರಹವಿದೆ. ಕಿರೀಟ, ಕರ್ಣಕುಂಡಲ, ಶಂಖ, ಚಕ್ರ, ಗದಾ, ಪದ್ಮ ಅಭಯಹಸ್ತಗಳಿಂದ ಭೂಷಿತನಾದ, ವೀರಗಚ್ಚೆ ಹಾಕಿನಿಂತ ಶ್ರೀ ವೀರನಾರಾಯಣ ಮೂರ್ತಿ ಮೋಹಕವಾಗಿದೆ. ವಿಶಾಲ ಪಕ್ಷಸ್ಥಲದಲ್ಲಿ ಲಕ್ಷ್ಮಿ, ಪೀಠ ಪ್ರಭಾವಳಿಯಲ್ಲಿ ದಶಾವತಾರ, ಎಡಬಲಗಳಲ್ಲಿ ಲಕ್ಷ್ಮೀ ಗರುಡರು ನಿಂತಿದ್ದಾರೆ.

ಈ ದೇವಾಲಯದ ಪ್ರಾಂಗಣದಲ್ಲಿ ಲಕ್ಷ್ಮೀ ನರಸಿಂಹ ದೇವಾಲಯ, ಸರ್ವೇಶ್ವರ ದೇವಾಲಯ, ಮುಂತಾದ ಪರಿವಾರ ದೇವತೆಯ ಗುಡಿಗಳಿವೆ.

ಕುಮಾರವ್ಯಾಸ ಭಾರತ - ಖ್ಯಾತ ಕವಿ ಕುಮಾರವ್ಯಾಸ ಗದುಗಿನ ವೀರ ನಾರಾಯಣನಷ್ಟೇ ಪ್ರಸಿದ್ಧ. ನಾರಣಪ್ಪ ಎಂಬ ಹೆಸರಿದ್ದರೂ ಕುಮಾರವ್ಯಾಸ ಎಂದೇ ಜನಪ್ರಿಯ. ಇಲ್ಲಿ 14ನೇ ಶತಮಾನದಲ್ಲಿ ನೆಲೆಸಿದ್ದ ಅವನು ಭಗವಂತನ ಧ್ವನಿಯನ್ನು ಆಲಿಸಿ ಭಾರತ ಬರೆದನೆಂದು ಪ್ರತೀತಿ ಇದೆ. ವೀರ ನಾರಾಯಣನು ಮಹಾ ಭಾರತದ ಕತೆ ಹೇಳುತ್ತಾ ಹೋದ ಹಾಗೆಯೇ ಕುಮಾರವ್ಯಾಸನು ಬರೆಯುತ್ತಿದ್ದನಂತೆ. ಭಗವಂತನ ವಿಗ್ರಹದ ಹಿಂದಿನಿಂದ ಧ್ವನಿ ಬರುತ್ತಿತ್ತಂತೆ. ದೇವರು ಒಂದು ಷರತ್ತು ಹಾಕಿದ್ದನಂತೆ. ಕುಮಾರವ್ಯಾಸನು ಧ್ವನಿ ಮಾತ್ರ ಕೇಳಬೇಕು, ಅದು ಯಾರೆಂದು ನೋಡುವ ಸಾಹಸ ಮಾಡಬಾರದು. ಹೀಗೆ ಕತೆ ಬರೆಯುವ ಕೈಂಕರ್ಯ ಅನೇಕ ವರ್ಷಗಳ ಕಾಲ ನಡೆಯಿತು. 10 ಪರ್ವ ಪೂರ್ಣಗೊಂಡಿತು. ಕುಮಾರವ್ಯಾಸನಿಗೆ ಕುತೂಹಲ ತಡೆಯಲಾಗಲಿಲ್ಲ. ಅವನು ಕತೆ ಹೇಳುತ್ತಿದ್ದವನನ್ನು

ನೋಡಲು ಮುಂದಾದ. ಭಗವಂತನೇ ಕತೆ ಹೇಳುತ್ತಿದ್ದನಂತೆ, ಅಷ್ಟೇ ಅಲ್ಲ, ಮಹಾ ಭಾರತ ಯುದ್ಧದ ದೃಶ್ಯವನ್ನೂ ಅವನು ಕಂಡನಂತೆ. ಆದರೆ ಕವಿಯು ಷರತ್ತು ಉಲ್ಲಂಘಿಸಿದ್ದರಿಂದ ದೇವರು ಕಣ್ಮರೆಯಾದನಂತೆ. ಹೀಗಾಗಿ ಕತೆ ಅಲ್ಲಿಗೇ ನಿಂತಿತು.

ಕುಮಾರವ್ಯಾಸನ ಕಥಾಮಂಜರಿಯಲ್ಲಿ ಗದಾಯುದ್ಧದವರೆಗೆ ಮಾತ್ರವಿದೆ. ಅವನ ನಿಧನಾನಂತರ, ಅನೇಕ ವರ್ಷಗಳ ಬಳಿಕ ಹುಟ್ಟಿದ ಶ್ರೇಷ್ಠ ಕವಿ ಲಕ್ಶ್ಮೀಶನು ಅಶ್ವಮೇಧ ಪರ್ವವನ್ನು ತನ್ನ 'ಜೈಮಿನಿ ಭಾರತ' ದಲ್ಲಿ ಪೂರ್ಣಗೊಳಿಸಿದ ಎನ್ನಲಾಗಿದೆ.

ಮಂದಿರದಲ್ಲಿ ಕುಮಾರವ್ಯಾಸ ಸ್ತಂಭವಿದೆ. ಇದು ಕುಮಾರವ್ಯಾಸ ಮಹಾಭಾರತವನ್ನು ಬರೆದಂತಹ ಸ್ಥಳ. ಮೂಲ ಮಹಾಭಾರತವನ್ನು ವ್ಯಾಸರು ಸಂಸ್ಕೃತದಲ್ಲಿ ಬರೆದಿದ್ದಾರೆ. ಇವರು ಹಳಕನ್ನಡದಲ್ಲಿ ಬರೆದಿದ್ದಾರೆ. ಕುಮಾರವ್ಯಾಸ ವಿಶೇಷ ದಿನಗಳಲ್ಲಿ ಬಂದು ದೇವಾಲಯದ ಹಿಂಭಾಗದಲ್ಲಿರುವ ಹೊಂಡದಲ್ಲಿ ಸ್ನಾನ ಮಾಡಿ ಒದ್ದೆಯಲ್ಲೇ ಮಹಾಭಾರತ ಬರೆಯುತ್ತಿದ್ದನಂತೆ. ಈಗ ಹೊಂಡ ಬತ್ತಿದೆ.

ದರ್ಶನ ಸಮಯ - ಬೆಳಿಗ್ಗೆ 6:00 ರಿಂದ 12:00 ಮತ್ತು ಸಂಜೆ 5:00 ರಿಂದ 8:00

ವಿಶೇಷ ಉತ್ಸವಗಳು - ನವರಾತ್ರಿ ಉತ್ಸವ, ಗೋಕುಲಾಷ್ಟಮಿ,

ಪ್ರಣಾಮ ಸ್ತೋತ್ರ - ಶ್ರೀ ವೀರನಾರಾಯಣ ದೇವಮ್ ಲಕ್ಷ್ಮೀ ಗರುಡ ಶೋಭಿತಮ್ | ಚಕ್ರ ಶಂಖ ಅಂಬುಜಾದಾರಮ್ ವನಮಾಲ ವಿಭೂಷಿತಮ್ ||

## 2. ಕಾಲಕಾಲೇಶ್ವರ ದೇವಸ್ಥಾನ ಗಜೇಂದ್ರಗಡ

ಗಜೇಂದದ್ರಗಡದಿಂದ ಐದು ಕಿ. ಮೀ ದೂರದಲ್ಲಿ 300 ಅಡಿ ಎತ್ತರವಾದ ಗುಡ್ಡದಲ್ಲಿರುವ ಕಾಲಕಾಲೇಶ್ವರ (ಕಾಳಕಾಳೇಶ್ವರ) ಗವಿ ದೇವಾಲಯ ಪುರಾತನ ಪುಣ್ಯಕ್ಷೇತ್ರವಾಗಿದೆ. ಈ ಗುಡ್ಡಕ್ಕೆ ಜಾಲೇಂದ್ರ ಪರ್ವತವೆಂದೂ ಕರೆಯುತ್ತಾರೆ. ಗಜಾಸುರವೆಂಬ ಅಸುರನನ್ನು ವಿಶ್ವೇಶ್ವರನು ಜಾಲೀಂದ್ರ ಗಿರಿಯಲ್ಲಿ ಕಾಲಭೈರವ ರೂಪದಿಂದ ಸಂಹರಿಸಿ ಶಿವನಾಗಿ ನೆಲೆ ನಿಂತ ಚರಿತ್ರೆಯಿದೆ. 'ದಕ್ಷಿಣ ಕಾಶಿ' ಎಂದು ಕರೆಯಲಾಗುವ ಇಲ್ಲಿ ಸ್ವಯಂಭೂ ಕಾಲಕಾಲೇಶ್ವರ ದೇವಾಲಯವಿದೆ. ಈ ಭಾಗದಲ್ಲಿಕಳಕಪ್ಪನ ಗುಡ್ಡವೆಂದೇ ಜನಜಃತವಾಗಿರುವ ಈ ಏಕ ಶಿಲಾ ಬಂಡೆಯ ತಾಣ ಮಕ್ಕಳಿಗೆ ಕೌತುಕದ ಅನುಭವ ನೀಡುತ್ತದೆ. ಮೆಟ್ಟಿಲು ಏರುತ್ತ ಸಾಗಿದಾಗ ಎರಡು ದೀಪ ಸ್ಥಂಭಗಳು ಎದುರಾಗಿ ಬೆಟ್ಟದ ಹೊಟ್ಟೆಗೆ ಹೊಕ್ಕಂತಾಗುತ್ತದೆ. ಮೇಲಿನ ಗವಿ ಪ್ರವೇಶಿಸಿದಾಗ ವಿಶಾಲ ಗರ್ಭಗುಡಿಯಿದೆ. ಅದರ ಎದುರಿಗೆ ಎರಡು ಪುಷ್ಕರಣಿಗಳಿವೆ. ಧೀರ್ಘ ಬಿಸಿಲು ಕಾಲದಲ್ಲೂ ಬತ್ತದೇ ಇರುವುದು ಇವುಗಳ ವಿಶೇಷತೆ. ಗವಿಯ ಉತ್ತರಕ್ಕೆ ಅಂತರಗಂಗೆ ಎಂದು ಕರೆಯಲಾಗುವ ಎರಡು ಹೊಂಡಗಳಿವೆ. ಇವುಗಳನ್ನು ಎಣ್ಣೆಗೊಂಡ ಮತ್ತು ಅರಸರಗೊಂಡ ಎಂದು ಕರೆಯಲಾಗುತ್ತದೆ. ಆಶ್ಚರ್ಯವೆಂದರೆ ಋತು ಬೇಧವಿಲ್ಲದೇ ನಿರಂತರವಾಗಿ ಆಲದ ಮರದ ಬೇರಿನಿಂದ ಈ ಹೊಂಡಕ್ಕೆ ಬೀಳುವ ನೀರು ಸದಾಕಾಲ ತಂಪಾಗಿದ್ದು, ತೀರ್ಥ ಸಮಾನವೆಂದು ಪರಿಗಣಿಸುತ್ತಾರೆ. ಬೆಟ್ಟ ಹತ್ತಿ ದಣಿದ ದೇಹಕ್ಕೆ ವಾತಾನೂಕೂಲಿತ ಸ್ಪರ್ಶಕಲ್ಪಿಸುವ ಈ ಗುಡ್ಡವು ಚಾರಣಕ್ಕೆ ಹೇಳಿ ಮಾಡಿಸಿದ ತಾಣವಾಗಿದೆ.

## 3. ದೊಡ್ಡಬಸಪ್ಪ ದೇವಸ್ಥಾನ, ಡಂಬಳ

ಡಂಬಳ, ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಒಂದು ಪುಟ್ಟ ಗ್ರಾಮ. ಇಲ್ಲಿನ ದೊಡ್ಡ ಬಸಪ್ಪ ಗುಡಿಯು ಕನ್ನಡ ನಾಡಿನ ಹೆಮ್ಮೆಯ ಪ್ರತೀಕವೆಂದರೆ ತಪ್ಪಲ್ಲ. ಕಲ್ಯಾಣದ ಚಾಲುಕ್ಯರು ನಿರ್ಮಿಸಿದ ಪ್ರಮುಖ ದೇವಾಲಯಗಲ್ಲಿ ಡಂಬಳದ ದೊಡ್ಡಬಸಪ್ಪನ ಗುಡಿಯೂ ಒಂದು. ಡಂಬಳದಲ್ಲಿ ಸುಮಾರು ಗುಡಿಗಳಿವೆ. ಅದರಲ್ಲಿ ಸೋಮೇಶ್ವರನ ಗುಡಿ, ಜಪದ ಬಾವಿ, ಕಲ್ಲೇಶ್ವರನ ಗುಡಿ ಪ್ರಮುಖವಾದುದು.

ದೊಡ್ಡ ಬಸಪ್ಪನ ಗುಡಿಯು ತನ್ನ ಮೂಲ ಸೌಂದರ್ಯವನ್ನು ಉಳಿಸಿಕೊಂಡಿದೆ. ಅಡಿಯಿಂದ ಮುಡಿಯವರಿಗೆ ನಕ್ಷತ್ರಾಕಾರದ ವಿನ್ಯಾಸವನ್ನು ಹೊಂದಿರುವ ಈ ದೇವಾಲಯ ಭಾರತದ

ವಾಸ್ತುಶಿಲ್ಪ ಅಧ್ಯಯನಕ್ಕೆ ವಿಶೇಷ ಉದಾಹರಣೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಹಾಗೂ ನಂದಿಮಂಟಪಗಳನ್ನು ಹೊಂದಿದೆ. ದೇವಾಲಯದ ಎಲ್ಲ ಭಾಗಗಳು ವಿಶಾಲವಾಗಿದ್ದು ಚಾಲುಕ್ಯರ ಶೈಲಿಯ ಅಚ್ಚು ಹೊಂದಿದೆ. ದೇವಾಲಯದ ಆವರಣದಲ್ಲಿ ಒಂದು ಚಿಕ್ಕ ಬಾವಿ ಇದೆ. ಇಲ್ಲಿನ ಒಂದು ಶಾಸನದ ಪ್ರಕಾರ ಈ ದೇವಾಲಯವನ್ನು ಸ್ವಯಂಭು ಈಶ್ವರನ ಗುಡಿಯೆಂದು ಕರೆಯುತಿದ್ದರು. ದೇವಾಲಯದ ನಂದಿಮಂಟಪದಲ್ಲಿ ಇರುವ ದೊಡ್ಡ ನಂದಿಯ ಮೂರ್ತಿಯಿಂದಾಗಿಯೇ ಈಗ ಈ ದೇವಾಲಯವನ್ನು ದೊಡ್ಡ ಬಸಪ್ಪನ ಗುಡಿ ಎಂದು ಕರೆಯುತ್ತಾರೆ. ಈ ದೇವಾಲಯದ ಕಾಲ ಸುಮಾರು 11ನೇಯ ಶತಮಾನ ಹಾಗು ಚಾಲುಕ್ಯ ರಾಜಾ ವಿಕ್ರಮಾದಿತ್ಯ VI ರ ರಾಣಿಯಾದ ಲಕ್ಷ್ಮೀದೇವಿಯ ಆಳ್ವಿಕ ಸಮಯದಲ್ಲಿ ಕಟ್ಟಲ್ಪಟ್ಟಿತ್ತು.

ದೊಡ್ಡ ಬಸಪ್ಪನಗುಡಿಯ ಹಿಂಭಾಗದಲ್ಲಿ ಸುಮಾರು 100 ಮೀಟರ್ ದೂರದಲ್ಲಿ ಇನ್ನೊಂದು ಸುಂದರ ದೇವಾಲಯವಿದೆ. ಈ ದೇವಾಲಯವನ್ನು ಸೋಮೇಶ್ವರಗುಡಿ ಎಂದು ಕರೆಯುತ್ತಾರೆ. ಈ ಗುಡಿಯ ಗರ್ಭಗೃಹ ಚೌಕಾಕಾರದ ರೂಪದಲ್ಲಿದ್ದು ಅಂತರಾಳ, ತೆರೆದ ಸಭಾಮಂಟಪ ಹಾಗೂ ಮುಖಮಂಟಪವನ್ನು ಹೊಂದಿದೆ. ಇವೆರಡು ಗುಡಿಗಳು ಊರಿನ ಹೊರಭಾಗದಲ್ಲಿದ್ದು ತಕ್ಕ ಮಟ್ಟಿಗೆ ಸುಸ್ಥಿತಿಯಲ್ಲಿದೆ. ಹಳೇಕೋಟೆಯ ಭಾಗದಲ್ಲಿ ಒಂದು ವಿಶಾಲವಾದ ಕೆರೆಯಿದೆ, ಈ ಕೆರೆಯನ್ನು ಶಾಸನದಲ್ಲಿ ಗೋಣಸಮುದ್ರ ಎಂದು ಕರೆದಿದ್ದಾರೆ. ಈ ಕೆರೆಯ ಏರಿಯಲ್ಲಿ ಆ ಕಾಲದ ತೂಬನ್ನು ಈಗಲೂ ಕಾಣಬಹುದು. ಸುತ್ತಲೂ ಕಲ್ಲಿನ ಗೋಡೆಯ ಕೋಟೆಯ ಅವಶೇಷಗಳನ್ನೂ ಕಾಣಬಹುದು.

ಅಲ್ಲಿಂದ ಸ್ವಲ್ಪ ದೂರದಲ್ಲಿ ಮರುನಿರ್ಮಾಣವಾದ ಕಲ್ಲೇಶ್ವರನ ಗುಡಿ ಇದೆ, ದೇವಾಲಯದ ಉಳಿದ ಭಾಗಗಳನ್ನು ಉಪಯೋಗಿಸಿ ಪುನರ್ಪ್ರತಿಷ್ಠೆ ಮಾಡಲಾಗಿದೆ. ಈ ಗುಡಿ ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಈ ಗುಡಿಯ ಬಳಿಯಲ್ಲಿ ಒಂದು ಸುಂದರವಾದ ಬಾವಿ ಇದೆ, ಈ ಬಾವಿಯನ್ನು ಜಪದ ಬಾವಿಯೆಂದು ಕರಿಯುತ್ತಾರೆ. ಸ್ವಲ್ಪ ವರ್ಷಗಳ ಹಿಂದೆ ಇದನ್ನು ಭೂಶೋಧನೆ ಮಾಡಿದರು. ಈ ಬಾವಿಯ ಸುತ್ತು 15 ಚಿಕ್ಕ ಗುಡಿಗಳಲ್ಲಿ 12ನೇ ಶತಮಾನದಲ್ಲಿ ಋಷಿಗಳು ಕೂತು ಜಪ ಮಾಡುತ್ತಿದ್ದರು ಎಂಬ ಪ್ರತೀತಿಯಿದೆ. ಈ ಬಾವಿಯ ನೋಟವು ಅತೀ ಸುಂದರ ಹಾಗೂ ತುಂಬ ಪ್ರಶಾಂತವಾಗಿತ್ತು. ಒಟ್ಟಾರೆ ಡಂಬಳವು ನಮ್ಮ ನಾಡಿನ ಹಾಗೂ ಕಲ್ಯಾಣ ಚಾಲುಕ್ಯರ ಕಲಾಕೃತಿಗೆ ಒಂದು ಅದ್ಭುತ ಉದಾಹರಣೆಯಾಗಿ ನಿಲ್ಲುತ್ತದೆ.

## 4. ಗದಗ ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ವೀರನಾರಾಯಣ ಶ್ರೀ ತ್ರಿಕುಟೇಶ್ವರ, ಶ್ರೀ ಸರಸ್ವತಿ, ಶ್ರೀ ಸೂರ್ಯನಾರಾಯಣ ಶ್ರೀ ನರಸಿಂಹ, ಶ್ರೀ ಸೋಮೇಶ್ವರ, ಶ್ರೀ ವಿಶ್ವೇಶ್ವರ ದೇವಸ್ಥಾನಗಳು, ಗದಗ, ಗದಗ ತಾಲ್ಲೂಕು
2. ಶ್ರೀ ಉಮಾ ಮಹೇಶ್ವರ ದೇವಸ್ಥಾನ, ಹರ್ತಿ, ಗದಗ ತಾಲ್ಲೂಕು
3. ಶ್ರೀ ಶಿವ ದೇವಾಲಯ, ಹೊಸೂರು, ಗದಗ ತಾಲ್ಲೂಕು
4. ಶ್ರೀ ತ್ರಿಲಿಂಗೇಶ್ವರ ದೇವಸ್ಥಾನ ಹೊಸೂರು, ಗದಗ ತಾಲ್ಲೂಕು
5. ಶ್ರೀ ವಿರೂಪಾಕ್ಷ, ಶ್ರೀ ಬಸವಣ್ಣ ದೇವಸ್ಥಾನ, ಶ್ರೀ ಕುಂಬಾರ ಬೀಡಿ ಈಶ್ವರ, ಶ್ರೀ ನಾನೇಶ್ವರ, ಶ್ರೀ ಮಣಿಕೇಶ್ವರ, ಶ್ರೀ ಸೂರ್ಯನಾರಾಯಣ, ಶ್ರೀ ನೀಲಕಂಠ ಶ್ರೀ ವಿಶ್ವೇಶ್ವರ, ಶ್ರೀ ಮಲ್ಲಿಕಾರ್ಜುನ ದೇವಸ್ಥಾನಗಳು, ಲಕ್ಕುಂಡಿ, ಗದಗ ತಾಲ್ಲೂಕು
6. ಶ್ರೀ ಭೋಗೇಶ್ವರ ದೇವಸ್ಥಾನ, ಯಲಿಸೂರು, ಗದಗ ತಾಲ್ಲೂಕು
7. ಶ್ರೀ ಲಕ್ಷ್ಮಿ ಲಿಂಗೇಶ್ವರ, ಶ್ರೀ ಸೋಮೇಶ್ವರ ದೇವಸ್ಥಾನಗಳು, ಲಕ್ಷ್ಮೇಶ್ವರ, ಶಿರಹಟ್ಟಿ ತಾಲ್ಲೂಕು
8. ಇಟಗಿ ಭೀಮಾಂಬಿಕಾ ದೇವಸ್ಥಾನ, ಇಟಗಿ, ರೋಣ ತಾಲ್ಲೂಕು

# 25. ಧಾರವಾಡ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಧಾರವಾಡ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಈ ಜಿಲ್ಲೆಯನ್ನು ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ ಜಿಲ್ಲೆಗಳು ಸುತ್ತುವರಿದಿವೆ. ಧಾರವಾಡ ಪಟ್ಟಣವು ಜಿಲ್ಲಾ ಕೇಂದ್ರ. ಅಳ್ನಾವರ, ಅಣ್ಣಿಗೇರಿ, ಧಾರವಾಡ, ಹುಬ್ಬಳ್ಳಿ, ಕಲಘಟಗಿ, ಕುಂದಗೋಳ, ನವಲಗುಂದ ಎಂಬ 5 ತಾಲ್ಲೂಕುಗಳನ್ನು ಹೊಂದಿದೆ.

ಮಲಪ್ರಭಾ, ಶಾಲ್ಮಲಾ, ಧರ್ಮ, ವರದಾ, ಗೂಗಿಹಳ್ಳ, ತುಪ್ಪರಿ ಹಳ್ಳ, ಪಿಂಜರಹಳ್ಳ, ಹಂದಿನಗಹಳ್ಳ, ಬೆಣ್ಣೆಹಳ್ಳ ಮುಂತಾದವು ಜಿಲ್ಲೆಯ ಪ್ರಮುಖ ನದಿಗಳು.

ಉತ್ತರ ಕರ್ನಾಟಕದ ಸಾಂಸ್ಕೃತಿಕ ಪ್ರಧಾನ ಕೇಂದ್ರ. ಹಿಂದೂಸ್ತಾನಿ ಸಂಗೀತದ ಶ್ರೇಷ್ಠ ಹಾಡುಗಾರರಾದ ಸವಾಯಿ ಗಂಧರ್ವ, ಮಲ್ಲಿಕಾರ್ಜುನ ಮನ್ಸೂರ, ಭೀಮಸೇನ ಜೋಶಿ, ಬಸವರಾಜ ರಾಜಗುರು, ಕುಮಾರ ಗಂಧರ್ವ ಮತ್ತು ಗಂಗುಬಾಯಿ ಹಾನಗಲ್ ಮುಂತಾದವರು ಈ ಜಿಲ್ಲೆಯವರು.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ ದ. ರಾ. ಬೆಂದ್ರೆ, ವಿ. ಕೆ. ಗೋಕಾಕ ಮತ್ತು ಗಿರೀಶ ಕಾರ್ನಾಡ ಧಾರವಾಡದವರು. ಕನ್ನಡ ಬರಹಗಾರರು ಮತ್ತು ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿ ಮತ್ತು ಸಿ. ಪಿ. ಸಿದ್ಧಶ್ರಮ ಅವರೂ ಧಾರವಾಡದವರು.

ನೀವು ಧಾರವಾಡದಲ್ಲಿ ಭೇಟಿಮಾಡಲೇಬೇಕಾದ ಸ್ಥಳಗಳು ಬಾಬುಸಿಂಗ್ ಠಾಕೂರ್ ಫೆಢಾ ಅಂಗಡಿ, ಬೆಂದ್ರೆ ಭವನ, ಕರ್ನಾಟಕ ವಿಶ್ವವಿದ್ಯಾಲಯದ ಉದ್ಯಾನವನ,

ಪ್ರಾಣಿಶಾಸ್ತ್ರ ವಸ್ತು ಸಂಗ್ರಹಾಲಯ, ಕರ್ನಾಟಕ ವಿಜ್ಞಾನ ಕಾಲೇಜು, ಧಾರವಾಡ

ಇತಿಹಾಸ ಮತ್ತು ಪುರಾತತ್ವ ವಸ್ತು ಸಂಗ್ರಹಾಲಯ, ಧಾರವಾಡ

ಭೂವಿಜ್ಞಾನ ವಸ್ತು ಸಂಗ್ರಹಾಲಯ, ಧಾರವಾಡ


DHARAVADA DISTRICT
KARNATAKA
N
BELGAUM DISTRICT
NAVALGUND
KUNDAGOL
KALGHATGI
GADAG DISTRICT
UTTARA KANNDA DISTRICT
HAVERI DISTRICT
KEY MAP
LEGEND
Metalled road
National Highway
Railway track
Taluk boundary
District headquarters
Taluk headquarters

## 1. ಚಂದ್ರಮೌಳೇಶ್ವರ ದೇವಸ್ಥಾನ, ಉಣಕಲ್ ಹುಬ್ಬಳ್ಳಿ

12ನೇ ಶತಮಾನದಲ್ಲಿ ನಿರ್ಮಿತವಾದ ಐತಿಹಾಸಿಕ ಪುರಾಣ ಪ್ರಸಿದ್ಧ ಹಾಗೂ ಶಿಲ್ಪಕಲೆಯನ್ನು ಒಳಗೊಂಡ ಶ್ರೀ ಚಂದ್ರಮೌಳೇಶ್ವರ ದೇವಾಲಯ ಉಣಕಲ್ ನಲ್ಲಿ ಇದೆ. ದೇಗುಲವು ಸುಮಾರು ೯೦೦ ವರ್ಷಗಳ ಸುದೀರ್ಘವಾದ ಇತಿಹಾಸವನ್ನು ಹೊಂದಿದ್ದು ಬದಾಮಿ ಚಾಳುಕ್ಯರ ಕಾಲದಲ್ಲಿ ಬಾದಾಮಿಯಲ್ಲಿ ನಿರ್ಮಿಸಿರುವ ಐಹೊಳೆ,ಪಟ್ಟದಕಲ್ಲುಗಳ ಮಾದರಿಯಲ್ಲಿಯೇ ಈ ದೇಗುಲವನ್ನು ನಿರ್ಮಿಸಲಾಗಿದೆ. ಈ ದೇಗುಲಕ್ಕೆ ಚತುರ್ಲಿಂಗೇಶ್ವರ ದೇಗುಲ, ಚಂದ್ರಮೌಳೇಶ್ವರ ದೇಗುಲ ಎಂದು ಕರೆಯಲಾಗುತ್ತದೆ.

ಪೂರ್ವಾಭಿಮುಖವಾಗಿರುವ ಚಂದ್ರಮೌಳೇಶ್ವರ ದೇವಾಲಯವು ಉತ್ತರ ಕರ್ನಾಟಕದ ಇತರ ಶಿವ ದೇವಾಲಯಗಳಿಗಿಂತ ವಿಭಿನ್ನ ವಾಗಿದೆ. ದೇಗುಲದ ಮುಂಭಾಗ ಮಹಾದ್ವಾರದ ಮೆಲ್ಭಾಗದಲ್ಲಿ ಶಿಲ್ಪಕಲೆಯ ಕೆತ್ತನೆ, ದ್ವಾರದ ಎಡ ಮತ್ತು ಬಲಬಾಗದಲ್ಲಿ ನೃತ್ಯ ಬಂಗಿಯ ಶಿಲ್ಪಕಲೆಯ ವಿನ್ಯಾಸ ದೇವಾಲಯದ ವೈಭವವನ್ನು ಇನ್ನಷ್ಟು ಹೆಚ್ಚಿಸುತ್ತದೆ. ಹೀಗೆ ದೇಗುಲದ ಹೊರಗಿನ ಗೋಡೆಯ ಮೇಲೆ ಶಿಲ್ಪಕಲೆಯನ್ನು ನೋಡುತ್ತಾ ಪ್ರದಕ್ಷಿಣೆ ಹಾಕುತ್ತಾ ನಡೆದರೆ ನೋಡುಗರನ್ನ ಒಂದು ಕ್ಷಣ ತನ್ನತ್ತ ಮಂತ್ರಮುಗ್ಧರನ್ನಾಗಿಸುತ್ತದೆ. ಕಾರಣ ದೇಗುಲಗಳ ಸುತ್ತಲೂ ಕೆತ್ತಲಾದ ಸುಂದರ ಶಿಲ್ಪಕಲೆಗಳು, ವಿಶಾಲ ಆವರಣದಲ್ಲಿ ಇರಿಸಲಾದ ಶಿಲ್ಪ ಕಲೆಗಳು,ದ್ವಾರದ ಮುಂಭಾಗದಲ್ಲಿ ಕಾಣಸಿಗುವ ಕುಳಿತ ಬಂಗಿಯಲ್ಲಿರುವ ನಂದಿವಿಗ್ರಹ, ನೃತ್ಯ ಬಂಗಿಯ ಮುಕ್ಕಾದ ವಿಗ್ರಹಗಳ ಕೆತ್ತನೆಗಳು, ದೇಗುಲದ ಕಲಾಕೃತಿಗಳಿಗೆ ಹಿಡಿದ ಕೈಗನ್ನಡಿ ಆಗಿದೆ.

ದೇಗುಲವನ್ನು ಒಳ ಪ್ರವೇಶಿಸುತ್ತಿದ್ದಂತೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಬಾಗಿಲುಗಳಿದ್ದು ಒಟ್ಟರೆಯಾಗಿ ಹನ್ನೆರಡು ಬಾಗಿಲುಗಳನ್ನು ಹೊಂದಿದೆ. ಎರಡು ಶಿವ ಲಿಂಗಗಳಿದ್ದು ದ್ವಾರದಲ್ಲಿ ಎಲ್ಲ ಶಿವ ದೇವಾಲಯಗಲಲ್ಲಿ ಇರುವ ಹಾಗೆ ಇಲ್ಲಿಯೂ ನಂದಿಯ ವಿಗ್ರಹವಿದೆ. ಒಂದು ಶಿವಲಿಂಗವು ಚತುರ್ಮುಖ ಲಿಂಗವಾಗಿದ್ದು ಇದು ಈ ಶಿವ ದೇವಾಲಯದ ವಿಶೇಷವಾಗಿದೆ. ದೇವಾಲಯವು ಇಂಗ್ಲೀಷನ ಪ್ಲಸ್ ಆಕಾರದಲ್ಲಿ ನಿರ್ಮಾಣಗೊಂಡಿರುತ್ತದೆ.

ಪ್ರತಿ ವರ್ಷವು ಮಾರ್ಚ ತಿಂಗಳಲ್ಲಿ ಸೂರ್ಯ ದಕ್ಷಿಣಾಯಣದಿಂದ ಉತ್ತರಾಯಣಕ್ಕೆ ದಿಕ್ಕು ಬದಲಿಸುವ ಯುಗಾದಿಯ ಪಾಡ್ಯ ದಿನದಂದು ಸೂರ್ಯ ಉದಯಿಸುವ ಸಮಯಕ್ಕೆ ಸರಿಯಾಗಿ ಮುಖ್ಯ ದ್ವಾರದ ಮೇಲೆ ನಿರ್ಮಿಸಲಾದ ಬೆಳಕಿನ ಕಿಂಡಿಯ ಮೂಲಕ ಸೂರ್ಯನ ಕಿರಣಗಳು ನೇರವಾಗಿ ನಂದಿಯ ಮೂಲಕ ಶಿವಲಿಂಗುವಿನ ಮೇಲೆ ನಂತರದಲ್ಲಿ

ಚತುರ್ಮುಖ ಲಿಂಗಕ್ಕೆ ಸ್ಪರ್ಶಿಸುತ್ತದೆ. ಈ ದೃಶ್ಯವನ್ನು ಕಣ್ತುಂಬಿಕೊಳ್ಳಲು ಈ ಸ್ಥಳಕ್ಕೆ ಸಹಸ್ರಾರು ಸಂಖ್ಯೆಯಲ್ಲಿ ಭಕ್ತರು ಆಗಮಿಸುತ್ತಾರೆ.

ಚಂದ್ರಮೌಳೇಶ್ವರ ದೇವಾಲಯದಲ್ಲಿ ಮಹಾನವಮಿ, ದೀಪಾವಳಿ ಶುಭ ದಿನಗಳಂದು ಊರಿನ ಎಲ್ಲ ಭಕ್ತರ ಸಮ್ಮುಖದಲ್ಲಿ ಪಾಲಿಕೆಉತ್ಸವವನ್ನು ನಡೆಸಲಾಗುತ್ತದೆ. ಹಾಗೇಯೇ ಶಿವರಾತ್ರಿಯ ದಿನದಂದು ಲಿಂಗ ದರ್ಶನಕ್ಕೆಂದು ವಿವಿಧಕಡೆಗಳಿಂದ ಭಕ್ತ ಸಾಗರವೇ ಹರಿದು ಬರುತ್ತದೆ

## 2. ಧಾರವಾಡ ಜಿಲ್ಲೆಯ ಇತರ ದೇವಾಲಯಗಳು,

1. ಶ್ರೀ ದತ್ತಾತ್ರೇಯ ದೇವಸ್ಥಾನ, ಧಾರವಾಡ, ಧಾರವಾಡ ತಾಲ್ಲೂಕು
2. ಶ್ರೀ ಕೃಷ್ಣ ಬಲರಾಮ ದೇವಸ್ಥಾನ, ಇಸ್ಕಾನ್ ಧಾರವಾಡ, ಧಾರವಾಡ ತಾಲ್ಲೂಕು
3. ಮುರುಘಾ ಮಠ ಧಾರವಾಡ,
4. ಶ್ರೀ ಬನಶಂಕರಿ ದೇವಸ್ಥಾನ, ಅಮರಗೋಳ (ಎಎಸ್ಐ), ಹುಬ್ಬಳ್ಳಿ ತಾಲ್ಲೂಕು
5. ಸಿದ್ಧಾರೂಢಾ ಮಠ, ಹುಬ್ಬಳ್ಳಿ, ಹುಬ್ಬಳ್ಳಿ ತಾಲ್ಲೂಕು
6. ಶ್ರೀ ಶೃಂಗೇರಿ ಶಂಕರ ಮಠ, ಹುಬ್ಬಳ್ಳಿ, ಹುಬ್ಬಳ್ಳಿ ತಾಲ್ಲೂಕು
7. ಮುಡಿ ಹನುಮಂತ ದೇವಸ್ಥಾನ, ಹಳೆಹುಬ್ಬಳ್ಳಿ, ಹುಬ್ಬಳ್ಳಿ ತಾಲ್ಲೂಕು
8. ತ್ರಿಕೂಟ ದೇವಸ್ಥಾನ, ಹಳೆಹುಬ್ಬಳ್ಳಿ, ಹುಬ್ಬಳ್ಳಿ ತಾಲ್ಲೂಕು
9. ಶ್ರೀ ವೀರಭದ್ರ ಸ್ವಾಮಿ, ಶ್ರೀ ಚಂದ್ರಮೌಳೀಶ್ವರ ದೇವಸ್ಥಾನಗಳು, ಉಣಕಲ್-ಹುಬ್ಬಳ್ಳಿ (ಎಎಸ್ಐ), ಹುಬ್ಬಳ್ಳಿ ತಾಲ್ಲೂಕು
10. ನವಗ್ರಹ ಜೈನ ದೇವಾಲಯ, ವರೂರು, ಹುಬ್ಬಳ್ಳಿ ತಾಲ್ಲೂಕು
11. ಶ್ರೀ ಅಮೃತೇಶ್ವರ ದೇವಸ್ಥಾನ, ಅಣ್ಣೀಗೇರಿ (ಎಎಸ್ಐ), ನವಲಗುಂದ ತಾಲ್ಲೂಕು

# 26. ಬೆಳಗಾವಿ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಬೆಳಗಾವಿ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಈ ಜಿಲ್ಲೆಯನ್ನು ಉತ್ತರಕನ್ನಡ, ಧಾರವಾಡ, ಗದಗ, ಬಾಗಲಕೋಟೆ, ವಿಜಯಪುರ ಜಿಲ್ಲೆಗಳು ಹಾಗೂ ಗೋವಾ, ಮಹಾರಾಷ್ಟ್ರ ಸುತ್ತುವರಿದಿವೆ. ಬೆಳಗಾವಿ ಪಟ್ಟಣವು ಜಿಲ್ಲಾ ಕೇಂದ್ರ. ಅಥಣಿ, ಬೈಲಹೊಂಗಲ, ಬೆಳಗಾವಿ, ಚಿಕ್ಕೋಡಿ, ಗೋಕಾಕ, ಹುಕ್ಕೇರಿ, ಕಾಗವಾಡ, ಖಾನಾಪುರ, ಕಿತ್ತೂರು, ಮೂಡಲಗಿ, ನಿಪ್ಪಾಣಿ, ರಾಮದುರ್ಗ, ರಾಯಬಾಗ, ಸವದತ್ತಿ ಎಂಬ 14 ತಾಲ್ಲೂಕುಗಳನ್ನು ಹೊಂದಿದೆ.

ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಮಾರ್ಕಂಡೆಯ ಇವು ಪ್ರಮುಖ ನದಿಗಳು.

ವಿಶೇಷ ತಿಂಡಿಗಳು - ಕರದಂಟ, ಕುಂದಾ ಮತ್ತು ಮಂಡಿಗೆ

ಕೆ.ಆರ್.ಸಿ.ಎಂ. ಸರ್ಕಾರಿ ಪುರಾತತ್ವ ವಸ್ತು ಸಂಗ್ರಹಾಲಯ, ಕಿತ್ತೂರು


BELAGAVI DISTRICT
KARNATAKA
N
BIJAPUR DISTRICT
MAHARASHTRA STATE
BAGALKOT DISTRICT
ATHNI
CHIKKODI
RAYBAG
HUKKERI
GOKAK
RAMDURG
BAIHONGAL
SAUNDATI
GADAG DISTRICT
GOA STATE
DHARWAD DISTRICT
UTTARA KANNADA DISTRICT
KEY MAP
LEGEND
LEGEND
Metalled road
National Highway
Railway track
Taluk boundary
District headquarters
Taluk headquarters
Hilly area

## 1. ಯೆಲ್ಲಮ್ಮ ದೇವಸ್ಥಾನ, ಸವದತ್ತಿ

ಬೆಳಗಾವಿಯಿಂದ 70 ಕಿ.ಮೀ ದೂರದಲ್ಲಿ, ಧಾರವಾಡದಿಂದ 35 ಕಿ.ಮೀ, ಸವದತ್ತಿ ನಗರದಿಂದ 5 ಕಿ.ಮೀ ದೂರದಲ್ಲಿರುವ (ಸಿದ್ಧಾಚಲಬೆಟ್ಟ) ಯಲ್ಲಮ್ಮನ ಗುಡ್ಡದಮೇಲೆ ಈ ಸುಂದರ ದೇವಾಲಯವನ್ನು ಚಾಲುಕ್ಯ ಮತ್ತು ರಾಷ್ಟ್ರಕೂಟರ ಶೈಲಿಯಲ್ಲಿ, 1514 ರಲ್ಲಿ ನಿರ್ಮಿಸಲಾಗಿದೆ ಮತ್ತು ಕೆತ್ತನೆಗಳು ಜೈನ ವಾಸ್ತುಶಿಲ್ಪವನ್ನು ಪ್ರತಿಬಿಂಬಿಸುತ್ತವೆ. ಶ್ರೀ ರೇಣುಕಾ ದೇವಿ (ಯಲ್ಲಮ್ಮ ದೇವಿ) ಈ ದೇವಾಲಯದ ಮುಖ್ಯ ದೇವತೆ. ದೇವಾಲಯದ ಆವರಣದಲ್ಲಿ ಗಣೇಶ, ಮಲ್ಲಿಕಾರ್ಜುನ, ಪರಶುರಾಮ, ಏಕನಾಥ, ಸಿದ್ಧೇಶ್ವರ ಮುಂತಾದ ದೇವಾಲಯಗಳಿವೆ. ಈ ದೇವಾಲಯಕ್ಕೆ ಮಹಾರಾಷ್ಟ್ರ, ಗೋವಾ ಮತ್ತು ಆಂಧ್ರಪ್ರದೇಶದ ಸಹ ಭಕ್ತರು ಬರುತ್ತಾರೆ. 1975 ರಿಂದ ಕರ್ನಾಟಕ ಮುಜರಾಯಿ ಇಲಾಖೆಯ ಆಡಳಿತಕ್ಕೊಳಪಟ್ಟಿದೆ.

ದೇವಾಲಯದ ಹಿಂಭಾಗದಲ್ಲಿ ಕುಂಕುಮ ಕುಂಡ, ಯೋನಿ ಕುಂಡ ಮತ್ತು ಅರಿಷಿಣ ಕುಂಡ ಎಂದು ಕರೆಯಲ್ಪಡುವ ಮೂರು ನೀರಿನ ಕೊಳಗಳಿವೆ. ಇವುಗಳನ್ನು ಪವಿತ್ರವೆಂದು ಪರಿಗಣಿಸಿ ಜನರು ಸ್ನಾನ ಮಾಡುತ್ತಾರೆ. ಜೋಗಲ್ ಭಾವಿ ಎಂಬ ಪವಿತ್ರ ಬಾವಿಯೂ ಇದೆ. ದೇವಾಲಯದ ಪಕ್ಕದಲ್ಲಿ ಪರಶುರಾಮ ಕ್ಷೇತ್ರ ಎಂದು ಕರೆಯಲ್ಪಡುವ ಮತ್ತೊಂದು ಸ್ಥಳವು ಪರಶುರಾಮನು ತಪಸ್ಸಿನಲ್ಲಿ ಕುಳಿತ ಸ್ಥಳವೆಂದು ನಂಬಲಾಗಿದೆ.

ಪೌರಾಣಿಕ ಹಿನ್ನೆಲೆ - ರೇಣುಕಾದೇವಿ ಋಷಿ ಜಮದಗ್ನಿಯ ಪತ್ನಿ. ಕೊನೆಯಮಗ ಪರಶುರಾಮನೂ ಸೇರಿ ಐದು ಮಕ್ಕಳತಾಯಿ. ಪಾತಿವ್ರತ್ಯದ ಮೇಲಿನ ಸಂಶಯದಿಂದ, ಜಮದಗ್ನಿಯು ತನ್ನ ಮಕ್ಕಳಿಗೆ ತಾಯಿಯನ್ನು ಸಂಹರಿಸಲು ಆಜ್ಞಾಪಿಸುತ್ತಾನೆ. ಎಲ್ಲರೂ ನಿರಾಕರಿಸಿದಾಗ ಪರಶುರಾಮನು ತನ್ನ ಕೊಡಲಿಯಿಂದ ಸಂಹರಿಸುತ್ತಾನೆ. ಸಂತೋಷಗೊಂಡ ಜಮದಗ್ನಿಯ ವರದಿಂದ ತಾಯಿಯನ್ನು ಬದುಕಿಸುತ್ತಾನೆ. ಹೀಗೇ ಎಲ್ಲರ ಸತ್ವಪರೀಕ್ಷೆ ನಡೆದು ಸಂಶಯ ನಿವಾರಣೆ ಯಾಗುವದು. ಆಕೆಯ ದೇವಾಲಯಗಳು ಬೆಳಗಾವಿ ಜಿಲ್ಲೆಯ ಸೌದತ್ತಿ, ಶಿವಮೋಗ್ಗ ಜಿಲ್ಲೆಯ ಚಂದ್ರಗುತ್ತಿ ಮತ್ತು ಬಳ್ಳಾರಿ ಜಿಲ್ಲೆಗಳ ಹುಲ್ಗಿಗಳಲ್ಲಿವೆ.

ರೇಣುಕಾದೇವಿ ದೇವಾಲಯಗಳಲ್ಲಿ ರೂಢಿಯಲ್ಲಿರುವ ದೇವದಾಸಿ ಪದ್ಧತಿ, ಜೋಗತಿ ಜೋಗಪ್ಪ, ಬೆತ್ತಲೆ ಸೇವೆ ಮುಂತಾದವುಗಳ ನಿರ್ಮೂಲನೆ ಮಾಡಲು ಹಲವು ಪ್ರಯತ್ನಗಳು ನಡೆಯುತ್ತಿವೆ.

ಉತ್ಸವಗಳು - ವರ್ಷದಲ್ಲಿ ಐದು ಬಾರಿ ಯೆಲ್ಲಮ್ಮ ದೇವಿ ಜಾತ್ರೆ ನಡೆಯುತ್ತದೆ.

ಭಕ್ತರ ಸೌಲಭ್ಯಗಳು - ಊಟ, ವಸತಿ, ಕುಡಿಯುವ ನೀರು, ಸ್ವಚ್ಛತೆ, ವಾಹನ ನಿಲುಗಡೆ, ಪಾದರಕ್ಷೆ ನಿಲುಗಡೆ, ರಕ್ಷಣೆ, ಭದ್ರತೆ, ತುರ್ತು ಚಿಕಿತ್ಸೆ, ಮತ್ತು ಇತರ ಸೌಲಭ್ಯಗಳನ್ನು ಒದಗಿಸಿದೆ.

## 2. ಬೆಳಗಾವಿ ಜಿಲ್ಲೆಯ ಇತರ ದೇವಾಲಯಗಳು

1. ಶ್ರೀ ಕಪಿಲೇಶ್ವರ ದೇವಸ್ಥಾನ, ಬೆಳಗಾವಿ, ಬೆಳಗಾವಿ ತಾಲ್ಲೂಕು
2. ಮಿಲಿಟರಿ ಮಹಾದೇವ, ಮಿಲಿಟರಿ ದುರ್ಗಾ ದೇವಸ್ಥಾನ, ರಾಮಕೃಷ್ಣ ಆಶ್ರಮ ಬೆಳಗಾವಿ ತಾಲ್ಲೂಕು
3. ಪಂತಬಾಳೆಕುಂದ್ರಿ ಮಹಾರಾಜರ ಸಮಾಧಿ, ಬಾಳೆಕುಂದ್ರಿ, ಬೆಳಗಾವಿ ತಾಲ್ಲೂಕು
4. ಚಿಕಲೇಶ್ವರ ದೇವಸ್ಥಾನ, ಕೊನ್ನೂರು, ಗೋಕಾಕ ತಾಲ್ಲೂಕು
5. ದಕ್ಷಿಣಮ್ನಾಯ ಕರವೀರ ಶಂಕರಲಿಂಗ ಪೀಠ ಸಂಕೇಶ್ವರ, ಹುಕ್ಕೇರಿ ತಾಲ್ಲೂಕು
6. ಶ್ರೀ ಭುವರಾಹ ನರಸಿಂಹ ದೇವಸ್ಥಾನ, ಹಲಸಿ, ಖಾನಾಪುರ ತಾಲ್ಲೂಕು
7. ಶ್ರೀ ಕಮಲಾ ನಾರಾಯಣ ದೇವಸ್ಥಾನ, ಡೆಗಾಂವ್, ಕಿತ್ತುರು ತಾಲ್ಲೂಕು
8. ಶ್ರೀ ಪಂಚಲಿಂಗೇಶ್ವರ ದೇವಸ್ಥಾನ, ಹೂಲಿ, ಸೌಂದತ್ತಿ ತಾಲ್ಲೂಕು

# 27. ಯಾದಗಿರಿ ಜಿಲ್ಲೆಯ ಪ್ರಸಿದ್ಧ ದೇವಾಲಯಗಳು

ಯಾದಗಿರಿ ಉತ್ತರಬಳನಾಡಿನ ಒಂದು ಜಿಲ್ಲೆಯಾಗಿದೆ. ಈ ಜಿಲ್ಲೆಯನ್ನು ಕಲಬುರಗಿ, ವಿಜಯಪುರ, ರಾಯಚೂರು ಜಿಲ್ಲೆಗಳು ಮತ್ತು ತೆಲಂಗಾಣಗಳು ಸುತ್ತುವರೆದಿವೆ. ಯಾದಗಿರಿ ನಗರವೇ ಜಿಲ್ಲಾಕೇಂದ್ರವು. ಜಿಲ್ಲೆಯಲ್ಲಿ ಗುರುಮಿಟ್ಕಲ್, ಹುಣಸಗಿ, ಶಹಾಪುರ, ಸುರಪುರ, ವಡಗೇರಾ, ಯಾದಗಿರಿ ಎಂಬ 6 ತಾಲ್ಲೂಕುಗಳಿವೆ.

ಕೃಷ್ಣಾ ಮತ್ತು ಭೀಮಾ ನದಿಗಳು




## 1. ಜಗದ್ಗುರು ಮೌನೇಶ್ವರ ಕ್ಷೇತ್ರ ದಕ್ಷಿಣ ಕಾಶಿ, ತಿನಥಣಿ

ಮೌನೇಶ್ವರ ಗುಡಿ ಎಂಬುದು ಹಿಂದೂ ದೇವಾಲಯವಾಗಿದ್ದು, ಶೋರಪುರದಿಂದ ದಕ್ಷಿಣಕ್ಕೆ 20 ಕಿ.ಮೀ ದೂರದಲ್ಲಿದೆ. ಈ ದೇವಾಲಯದ ವಿಶೇಷತೆಯೆಂದರೆ ಅದು ಹಿಂದೂ ಮತ್ತು ಮುಸ್ಲಿಂ ಭಕ್ತರನ್ನು ಆಕರ್ಷಿಸುತ್ತದೆ. ವಿಜಯನಗರ ಸಾಮ್ರಾಜ್ಯದ ನಂತರದ ಉತ್ತರ ಕರ್ನಾಟಕ ದೇವಾಲಯದ ವಾಸ್ತುಶಿಲ್ಪವು ಮಸೀದಿಯ ವೈಶಿಷ್ಟ್ಯಗಳನ್ನು ಹೊಂದಿದೆ. ಕಪ್ಪು

ಕಲ್ಲಿನ ಆಮೆ ದೇವಾಲಯದ ಮುಖ್ಯ ಬಾಗಿಲಿನ ನೆಲವನ್ನು ಅಲಂಕರಿಸುತ್ತದೆ. ಬಾಗಿಲಿನ ಚೌಕಟ್ಟು ಪ್ರಾಚೀನವೆಂದು ತೋರುತ್ತದೆ.

ಈ ಸ್ಥಳವು ಕಿಕ್ಕಿರಿದಿಲ್ಲ, ಅನೇಕ ಬೇವಿನ ಮರಗಳ ದೇವಾಲಯಕ್ಕೆ ನೆರಳು ಒದಗಿಸಿವೆ. ಹಳೆಯದಾದರೂ ದೇವಾಲಯವನ್ನು ಆಧುನೀಕರಿಸಲಾಗಿದೆ. ಆದಾಗ್ಯೂ, ದೇವಾಲಯದ ಪ್ರವೇಶದ್ವಾರದ ಎದುರಿನ ದೀಪ ಗೋಪುರವು ಹಳೆಯದೆ.

ಕೃಷ್ಣ ನದಿ ಮೌನೇಶ್ವರ ದೇವಸ್ಥಾನದಿಂದ ಕೇವಲ 100 ಮೀಟರ್ ದೂರದಲ್ಲಿದೆ. ಕಲ್ಲಿನ ಹಾಸಿಗೆಯ ಮೇಲೆ ಕಾಂಕ್ರೀಟ್ ರಸ್ತೆ ಹಾಕಲಾಗಿದೆ. ಮಾರ್ಗದ ಕೊನೆಯಲ್ಲಿ ಒಂದು ವೇದಿಕೆಯಾಗಿದ್ದು ಅದನ್ನು ಕೊರಾಕಲ್ ಬಂದರಿನಂತೆ ಬಳಸಲಾಗುತ್ತದೆ.

